ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

'ಇಕಾಮತುದ್ದೀನ್' ಅಥವಾ ಧರ್ಮ ಸಂಸ್ಥಾಪನೆಯ ಕಾರ್ಯವು ಮುಸ್ಲಿಮ್ ಉಮ್ಮತ್‌ನ ಕಡ್ಡಾಯ ಕರ್ತವ್ಯವಾಗಿದೆ. ಇದು ಕುರ್‌ಆನ್ ಮತ್ತು ಸುನ್ನತ್ತಿನಿಂದ ಸಾಬೀತಾದ ಒಂದು ವಾಸ್ತವಿಕತೆಯಾಗಿದೆ. ಅದು ಮುಸಲ್ಮಾನರ ಜೀವನೋದ್ದೇಶವಾಗಿದೆ. ಈ ಕರ್ತವ್ಯ ನಿರ್ವಹಣೆಯಿಂದಲೇ ನಾವು ಅಲ್ಲಾಹನ ಸಂಪ್ರೀತಿಯನ್ನು ಗಳಿಸಬಲ್ಲೆವು ಆದ್ದರಿಂದಲೇ ಎಂತಹ ಸಂಕಷ್ಟಗಳು ಬರಲಿ, ಆಪತ್ತುಗಳೇ ಬರಲಿ ನಾವು ಉದ್ದೇಶವನ್ನು ಕೈಬಿಡಬಾರದು.

ಈ ಕೃತಿಯಲ್ಲಿ ಲೇಖಕರು ಪವಿತ್ರ ಕುರ್‌ಆನಿನಿಂದ ಹತ್ತು ಆಧಾರಗಳನ್ನು ನೀಡುತ್ತಾ, ಮುಸಲ್ಮಾನರಲ್ಲಿ ಜಾಗೃತಿಯುಂಟು ಮಾಡಲು ಪ್ರಯತ್ನಿಸಿದ್ದಾರೆ. ಇದು ಒಂದು ಸಣ್ಣ ಕೃತಿಯಾದರೂ ಅಗಾಧವಾದ ಚಿಂತನಾರ್ಹ ಹಾಗೂ ಪ್ರಾಯೋಗಿಕ ವಿಷಯಗಳು ಇದರಲ್ಲಿ ಅಡಕವಾಗಿದೆ. ಕೇವಲ ನಮಾಝ್, ಉಪವಾಸಗಳಂತಹ ಆರಾಧನಾ ಕರ್ಮಗಳು, ದಿಕ್ರ್ ತಸ್ಬೀಹ್, ತಿಲಾವತ್ ಮುಂತಾದ ಸುಲಭ ಸಾಧ್ಯ ವಿಷಯಗಳನ್ನೇ ಧರ್ಮವೆಂದು ಬಗೆದಿರುವ ಹಾಗೂ ಅದರ ಹೊರಗಿನ ವಿಷಯಗಳೆಲ್ಲ ಲೌಕಿಕ ಕಾರ್ಯಗಳೆಂದು ಬಗೆದಿರುವ ಮುಸ್ಲಿಮರು ಈ ಕೃತಿಯ ಅಧ್ಯಯನದಿಂದ ತಾವು ಎಲ್ಲಿ ಎಡವಿ ಬಿದ್ದಿದ್ದೇವೆ ಎಂಬುದನ್ನು ಕಂಡುಕೊಳ್ಳಬಹುದು.

ಈ ಕೃತಿಯ ಲೇಖಕರಾದ ಮೌಲಾನಾ ಉರೂಜ್ ಕಾದ್ರೀ(ರ) ಇಸ್ಲಾಮಿ ಆಂದೋಲನದ ಮುಂಚೂಣಿ ನಾಯಕರಲ್ಲೊಬ್ಬರಾಗಿದ್ದರು. ಕುರ್‌ಆನ್-ಸುನ್ನತ್ತಿನ ಅಗಾಧ ಜ್ಞಾನವನ್ನು ಹೊಂದಿದ್ದ ಅವರು ಉರ್ದುವಿನಲ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾರೆ. ದೆಹಲಿಯಿಂದ ಹೊರಡುವ 'ಝಿಂದಗಿ' ಉರ್ದು ಪತ್ರಿಕೆಯ ಸಂಪಾದಕರಾಗಿ ಕೊನೆಗಾಲದ ವರೆಗೂ ಸೇವೆ ಸಲ್ಲಿಸಿದ್ದರು. ಅವರ ಬರವಣಿಗೆಯಲ್ಲಿ ಬಹಳ ಆಕರ್ಷಣೆಯಿತ್ತು. ಅದು ನೇರವಾಗಿ ಹೃದಯವನ್ನು ನಾಟುತ್ತಿತ್ತು. ಅಲ್ಲದೆ ಅವರೋರ್ವ ಕವಿಯಾಗಿ ಅನೇಕ ಕವನ ಸಂಕಲನಗಳನ್ನು ಹೊರತಂದಿದ್ದಾರೆ. ಸೂಫೀ ತರೀಕತ್‌ನವರಾಗಿದ್ದ ಅವರನ್ನು ಇಸ್ಲಾಮಿ ಆಂದೋಲನವು ಇಸ್ಲಾಮಿನ ಸೇವಾರಂಗಕ್ಕೆ ಎಳೆದು ತಂದಿತ್ತು.

ಅವರ 'ಇಕಾಮತುದ್ದೀನ್ ಫರ್ಝ್ ಹೈ' ಎಂಬ ಉರ್ದು ಕಿರು ಪುಸ್ತಕದ ಅನುವಾದವೇ ವಾಚಕರ ಕೈಯಲ್ಲಿರುವ ಈ ಕೃತಿ. ಇದರ ಅಧ್ಯಯನವು ಉಮ್ಮತ್ತಿಗೆ ಧರ್ಮಸಂಸ್ಥಾಪನೆಯ ಕಾರ್ಯಕ್ಕೆ ಪ್ರೇರಕವಾಗಲೆಂದು ಹಾರೈಸುತ್ತೇವೆ.

- ಶಾಂತಿ ಪ್ರಕಾಶನ

# ಮುನ್ನುಡಿ

'ಇಕಾಮತುದ್ದೀನ್' ಮುಸ್ಲಿಮರ ಕಡ್ಡಾಯ ಕರ್ತವ್ಯವೆಂಬುದರ ಕುರಿತು, ಕುರ್‌ಆನ್-ಸುನ್ನತ್‌ಗಳ ಆಧಾರಲ್ಲಿ ಒಂದು ಕಿರು ಪುಸ್ತಕವನ್ನು ರಚಿಸಬೇಕೆಂಬ ಹಂಬಲವಿತ್ತು. ಅದರ ಫಲಶ್ರುತಿಯೇ ಈ ಕಿರು ಪುಸ್ತಕ. ಇದರಲ್ಲಿ ಜನರ ಆಕ್ಷೇಪಗಳು ಹಾಗೂ ಅವುಗಳಿಗೆ ಉತ್ತರಿಸುವ ಬದಲು ಕುರ್‌ಆನ್-ಸುನ್ನತ್‌ನ ಪ್ರಮಾಣಗಳನ್ನಷ್ಟೇ ನೀಡಲಾಗಿದೆ. ಸಣ್ಣ ಅವಧಿಯಲ್ಲಿ ಇದನ್ನು ಓದಿ ವಿಷಯವನ್ನು ಮನವರಿಕೆ ಮಾಡಬಲ್ಲಷ್ಟು ಇದು ಸಂಕ್ಷಿಪ್ತವಾಗಿದೆ.

'ಇಕಾಮತುದ್ದೀನ್' ನಮ್ಮ ಮೆದುಳಿನ ಸೃಷ್ಟಿಯಲ್ಲ, ಅದು ಅಲ್ಲಾಹನು ಮುಸ್ಲಿಮರಿಗೆ ವಹಿಸಿಕೊಟ್ಟ ಕಡ್ಡಾಯ ಕರ್ತವ್ಯವಾಗಿದೆಯೆಂದು ಕುರ್‌ಆನ್-ಸುನ್ನತ್‌ನ ಆಧಾರದಲ್ಲಿ ಸ್ಪಷ್ಟಪಡಿಸಿದ್ದೇನೆ. ಅದುವೇ ಮುಸ್ಲಿಮರ ಜೀವನದ ಧ್ಯೇಯೋದ್ದೇಶವಾಗಿದೆ. ಈ ಕರ್ತವ್ಯವನ್ನು ಈಡೇರಿಸುವುದರಿಂದ ಮಾತ್ರ ನಾವು ನಮ್ಮ ಪ್ರಭು(ಅಲ್ಲಾಹ್)ವಿನ ಸಂಪ್ರೀತಿಯನ್ನು ಗಳಿಸಬಲ್ಲೆವು ಎಂದು ನಾವು ದೃಢವಾಗಿ ನಂಬಿದ್ದೇವೆ. ಆದ್ದರಿಂದಲೇ ಎಂತಹ ಸಂಕಷ್ಟಗಳು ಹಾಗೂ ಎಂತಹ ವಿರೋಧಗಳು ಎದುರಾದರೂ ನಾವು ನಮ್ಮ ಈ ಕರ್ತವ್ಯವನ್ನು ಕೈ ಬಿಡುವುದಿಲ್ಲ, ಅಲ್ಲಾಹನು ನಮ್ಮಿಂದ ಸಂತುಷ್ಟನಾಗಿದ್ದರೆ ಸಕಲ ಪ್ರಪಂಚದ ಕೋಪವನ್ನು ನಾವು ಲೆಕ್ಕಿಸಲಾರೆವು. ಒಮ್ಮೆ ಮುಆವಿಯಾ(ರ) ಆಯಿಶಾ(ರ)ರಿಗೆ ಪತ್ರ ಬರೆದು, 'ನನಗೇನಾದರೂ ಉಪದೇಶಿಸಿರಿ' ಎಂದು ವಿನಂತಿಸಿದರು. ಅವರು ಪ್ರವಾದಿ(ಸ) ಅವರ ಒಂದು ಹದೀಸನ್ನು ಬರೆದು ಕಳಿಸಿದರು. ಅದರ ಸಾರಾಂಶ ಹೀಗಿದೆ- 'ಅಲ್ಲಾಹನನ್ನು ಸಂಪ್ರೀತಿಗೊಳಿಸಿರಿ. ಅದರಿಂದ ಇಡೀ ಲೋಕವೇ ನಿಮ್ಮ ವಿರೋಧಿಯಾದರೂ ಸರಿ.'

ಅಲ್ಲಾಹನು ಈ ಪುಸ್ತಕ ರಚನೆಯ ಕಿರು ಪ್ರಯತ್ನವನ್ನು ಸ್ವೀಕರಿಸಲಿ. ಮುಸ್ಲಿಮರ ಹೃದಯಗಳನ್ನು ತೆರೆಯಲಿ ಮತ್ತು ಈ ವಿನೀತ ದಾಸನ ಕುಂದು ಕೊರತೆಗಳನ್ನು ಮನ್ನಿಸಲಿ ಎಂದು ಪ್ರಾರ್ಥನೆ. ಆಮೀನ್.

-ಸೈಯದ್ ಅಹ್ಮದ್ ಉರೂಜ್ ಕಾದ್ರೀ

# ಅನುಕ್ರಮಣಿಕೆ

# 'ಇಕಾಮತುದ್ದೀನ್'ನ ಅರ್ಥ ವಿವರಣೆ

'ಇಕಾಮತುದ್ದೀನ್' ಅಥವಾ ಧರ್ಮ ಸಂಸ್ಥಾಪನೆಯು ಕಡ್ಡಾಯ ಕರ್ತವ್ಯವೆಂಬುದಕ್ಕೆ ಆಧಾರಗಳನ್ನು ನೀಡುವುದಕ್ಕೆ ಮುಂಚೆ ಅದರ ಅರ್ಥ-ತಾತ್ಪರ್ಯವನ್ನು ಸ್ಪಷ್ಟಪಡಿಸುವುದು ಅಗತ್ಯವೆನಿಸುತ್ತದೆ.

ಇಕಾಮತುದ್ದೀನ್‌ನಲ್ಲಿ 'ದೀನ್' (ಧರ್ಮ) ಎಂದರೆ ಸರ್ವ ಲೋಕಗಳ ಪ್ರಭುವಾದ ಅಲ್ಲಾಹನು ತನ್ನ ಸಕಲ ಪ್ರವಾದಿಗಳ ಮೂಲಕ ವಿವಿಧ ಕಾಲಘಟ್ಟಗಳಲ್ಲಿ ಮತ್ತು ಬೇರೆ ಬೇರೆ ದೇಶಗಳಿಗೆ ಕಳುಹಿಸುತ್ತಿದ್ದ ಹಾಗೂ ಕೊನೆಯದಾಗಿ ತನ್ನ ಅಂತಿಮ ಪ್ರವಾದಿ ಮುಹಮ್ಮದ್(ಸ) ಅವರ ಮೂಲಕ ಮಾನವರ ಮಾರ್ಗದರ್ಶನಕ್ಕಾಗಿ ಪರಿಪೂರ್ಣ ರೂಪದಲ್ಲಿ ಅವತೀರ್ಣಗೊಳಿಸಿದ ಧರ್ಮವಾಗಿದೆ. ಅಲ್ಲಾಹನ ಬಳಿ ಸ್ವೀಕಾರಾರ್ಹವಾಗಿರುವ ಈ ಧರ್ಮವು ಅತ್ಯಂತ ಸುರಕ್ಷಿತವಾಗಿ ಈಗ ಈ ಲೋಕದಲ್ಲಿದೆ. ಅದರ ಹೆಸರೇ 'ಇಸ್ಲಾಮ್'.

ಈ ಧರ್ಮವು ಮಾನವನ ಆಂತರಿಕ ಮತ್ತು ಬಾಹ್ಯವಾದ ಎಲ್ಲ ರಂಗಗಳನ್ನೂ ಅವನ ಜೀವನದ ವೈಯಕ್ತಿಕ ಮತ್ತು ಸಾಮೂಹಿಕವಾದ ಎಲ್ಲ ಮಗ್ಗುಲುಗಳನ್ನೂ ಒಳಗೊಂಡಿದೆ. ಮಾನವನ ಮೂಲಭೂತ ವಿಶ್ವಾಸ, ಆರಾಧನಾ ಕರ್ಮಗಳು ಹಾಗೂ ನೈತಿಕತೆಯಿಂದ ಹಿಡಿದು ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯದ ತನಕ ಮಾನವ ಜೀವನದ ಯಾವ ರಂಗವೂ ಇದರ ಪರಿಧಿಯಿಂದ ಹೊರಗಿಲ್ಲ.

ಈ ಧರ್ಮವು ಯಾವ ರೀತಿ ದೇವ ಸಂಪ್ರೀತಿ ಮತ್ತು ಪರಲೋಕ ಮೋಕ್ಷವನ್ನು ಖಚಿತಪಡಿಸುತ್ತದೋ ಅದೇ ರೀತಿ ಲೌಕಿಕ ಸಮಸ್ಯೆಗಳ ಪರಿಹಾರಕ್ಕೆ ಅತ್ಯುತ್ತಮ ಜೀವನ ವ್ಯವಸ್ಥೆಯೂ ಆಗಿದೆ ಹಾಗೂ ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ಸತ್ಕ್ರಾಂತಿ ಮತ್ತು ಪ್ರಗತಿಶೀಲ ನಿರ್ಮಾಣವು ಕೇವಲ ಇದರ ಸ್ಥಾಪನೆಯಿಂದಲೇ ಸಾಧ್ಯ.

ಈ ಧರ್ಮದ ಸ್ಥಾಪನೆಯೆಂದರೆ ಯಾವುದೇ ವಿಂಗಡನೆಯಿಲ್ಲದ ಆ ಸಂಪೂರ್ಣ ಧರ್ಮವನ್ನು ಪ್ರಾಮಾಣಿಕವಾಗಿ ಏಕಾಗ್ರಚಿತ್ತದಿಂದ ಅನುಸರಿಸುವುದು ಹಾಗೂ ಜೀವನದ ವೈಯಕ್ತಿಕ ಮತ್ತು ಸಾಮೂಹಿಕವಾದ ಎಲ್ಲ ರಂಗಗಳಲ್ಲೂ ಅದನ್ನು ಜಾರಿಗೊಳಿಸುವುದಾಗಿದೆ. ಅದರಲ್ಲಿ ವ್ಯಕ್ತಿಯ ವಿಕಾಸ, ಸಮಾಜದ ನಿರ್ಮಾಣ ಮತ್ತು ರಾಷ್ಟ್ರ ರಚನೆ ಎಲ್ಲವೂ ಸೇರಿದೆ.

ಧರ್ಮ ಸಂಸ್ಥಾಪನೆಯ ಈ ವ್ಯಾಖ್ಯೆಯ ಪ್ರಕಾರ, ಇಸ್ಲಾಮ್ ಧರ್ಮವನ್ನು ಅದರ ಎಲ್ಲ ನಿಯಮೋಪನಿಯಮಗಳು ಹಾಗೂ ಅದರ ಆದೇಶ-ನಿರ್ದೇಶನಗಳೊಂದಿಗೆ ಮಾನವನ

ಸಂಪೂರ್ಣ ಜೀವನದ ಧರ್ಮವನ್ನಾಗಿ ಮಾಡಬೇಕಾಗಿದೆ. ಜೀವನದ ಕೆಲವು ರಂಗಗಳಲ್ಲಿ ಇಸ್ಲಾಮನ್ನು ಅನುಸರಿಸುವುದು ಮತ್ತು ಕೆಲವು ರಂಗಗಳಲ್ಲಿ ಇಸ್ಲಾಮೇತರ ಕಾನೂನುಗಳನ್ನು ಅನುಸರಿಸುವುದು ಸಂಪೂರ್ಣ ತಪ್ಪಾಗಿದೆ. ಈ ರೀತಿಯ ವಿಂಗಡನೆಗೆ ಧರ್ಮದಲ್ಲಿ ಅವಕಾಶವೇ ಇಲ್ಲ. ಇಸ್ಲಾಮಿನ ನಿಯಮಗಳನ್ನು ಮಸೀದಿಯಲ್ಲಿ ಅನುಸರಿಸುವುದು ಎಷ್ಟು ಅಗತ್ಯವೋ, ಅಷ್ಟೇ ಅಗತ್ಯ ಪೇಟೆಯಲ್ಲೂ, ಶಾಸನ ಸಭೆಯಲ್ಲೂ, ಪಾರ್ಲಿಮೆಂಟಿನಲ್ಲೂ ಅದರ ಕಾನೂನುಗಳನ್ನು ಅನುಸರಿಸುವುದು ಅಗತ್ಯವಾಗಿದೆ. ಪಾರ್ಲಿಮೆಂಟಿನಲ್ಲಿ ಕೂತು ಇಡೀ ಪ್ರಪಂಚದ ಒಡೆಯ ಮತ್ತು ಅಧಿಪತಿಯ ಕಾನೂನುಗಳಿಗೆ ವಿರುದ್ಧವಾಗಿ ಕಾನೂನು ರಚಿಸುವುದು ಅಥವಾ ತನಗಿಷ್ಟವಾದ, ತಾನು ರಚಿಸಿದ ಕಾನೂನುಗಳನ್ನು ಜಾರಿಗೊಳಿಸುವುದು ಅವನ ವಿರುದ್ಧ ಬಂಡಾಯವಾಗಿದೆ. ಈ ಬಂಡಾಯ ಕೊನೆಗೊಳ್ಳುವ ಮತ್ತು ಅಲ್ಲಾಹನ ವಚನ ಪ್ರಾಬಲ್ಯ ಹೊಂದುವ ತನಕ 'ಇಕಾಮತುದ್ದೀನ್' ಪೂರ್ಣಗೊಳ್ಳಲಾರದು.

## 'ಇಕಾಮತುದ್ದೀನ್'ನ ಪ್ರಾಯೋಗಿಕ ರೂಪ:

ಈ ಧರ್ಮದ ಸಂಸ್ಥಾಪನೆಯ ಪ್ರಾಯೋಗಿಕರೂಪ ಹಾಗೂ ಅತ್ಯುತ್ತಮ ಮಾದರಿಯು ಪ್ರವಾದಿ ಮುಹಮ್ಮದ್(ಸ) ಮತ್ತು ನಾಲ್ವರು ಖಲೀಫರು ಸ್ಥಾಪಿಸಿದ ವ್ಯವಸ್ಥೆಯಾಗಿದೆ. ಅವರು ನೆಲೆಗೊಳಿಸಿದ ಆಡಳಿತ ವ್ಯವಸ್ಥೆಯಲ್ಲಿ ಧರ್ಮವನ್ನು ಸಂಪೂರ್ಣವಾಗಿ ಯಾವುದೇ ವಿಂಗಡನೆಯಿಲ್ಲದೆ ಪ್ರಾಮಾಣಿಕವಾಗಿ ಅನುಸರಿಸಲಾಗುತ್ತಿತ್ತು. ವೈಯಕ್ತಿಕ ಮತ್ತು ಸಾಮೂಹಿಕವಾದ ಎಲ್ಲ ರಂಗಗಳಲ್ಲೂ ಜಾರಿಗೊಳಿಸಲಾಗಿತ್ತು. ಇಸ್ಲಾಮೀ ಆಡಳಿತ ಮತ್ತು ಕುರ್‌ಆನ್ ಬಯಸುವ ಸಮಾಜ ಹೇಗಿರುತ್ತದೆಂದೂ ಇಕಾಮತುದ್ದೀನ್‌ನ ಅರ್ಥ ತಾತ್ಪರ್ಯವೇನೆಂದೂ ಪ್ರತಿಯೊಬ್ಬನೂ ಅದನ್ನು ನೋಡಿ ಗ್ರಹಿಸಬಹುದಾಗಿತ್ತು. ಪ್ರವಾದಿ ಯವರ ಮತ್ತು ಖಲೀಫರ ಕಾಲದ ಆದರ್ಶ ಸಮಾಜದ ಸುಂದರ ಸ್ವರೂಪವು ಚರಿತ್ರೆಯಲ್ಲಿ ಸುರಕ್ಷಿತವಾಗಿ ಉಳಿದಿದೆ. ಇದು ಕೇವಲ ಮಾದರಿಯಲ್ಲ, 'ಇಕಾಮತುದ್ದೀನ್' ಕಡ್ಡಾಯ ವೆಂಬುದರ ಸ್ಪಷ್ಟ ಆಧಾರವಾಗಿದೆ.

## ಮುಸ್ಲಿಮರ ಅಧಃ ಪತನದ ಪರಿಣಾಮ:

ಶತಮಾನಗಳಿಂದ ಮುಸ್ಲಿಮರು ಅಧಃಪತನಕ್ಕೆ ಗುರಿಯಾಗಿರುವ ಕಾರಣ, ಇಂದು ಅವರು ಇಸ್ಲಾಮನ್ನು ಇತರ ಮತ ಧರ್ಮಗಳಂತೆಯೇ ಒಂದು ಮತವೆಂದು ಭಾವಿಸಿದ್ದಾರೆ. ನಮಾಝ್, ಉಪವಾಸ ವ್ರತ, ಝಕಾತ್, ಹಜ್ಜ್, ನಿಕಾಹ್, ತಲಾಕ್, ವಾರೀಸು ಹಕ್ಕು ಹಂಚಿಕೆ ಹಾಗೂ ಅದೇ ರೀತಿಯ ಕೆಲವು ವಿಷಯಗಳಿಗೆ ತಮ್ಮ ಧರ್ಮವನ್ನು ಸೀಮಿತಗೊಳಿಸಿದ್ದಾರೆ. ಅವರ ದೃಷ್ಟಿಯಲ್ಲಿ ಮತ ಪ್ರವಚನ, ಉಪದೇಶಗಳು ಹಾಗೂ ಸಭೆ ಸಮಾರಂಭಗಳು, ಕಲಿಮ, ನಮಾಝ್‌ಗಳ ಶಿಕ್ಷಣದಿಂದ 'ದೀನ್' (ಧರ್ಮ) ಮತ್ತು 'ಈಮಾನಿನ'(ವಿಶ್ವಾಸ) ಎಲ್ಲ ಬೇಡಿಕೆಗಳೂ ಈಡೇರುತ್ತವೆ. ಇನ್ನು

ರಾಜಕೀಯ ಹಾಗೂ ಆಡಳಿತ ವ್ಯವಹಾರಗಳನ್ನು, ಲೌಕಿಕ ವಿಷಯಗಳೆಂದು ಸಾರಿ ಅದನ್ನು ಲೌಕಿಕವಾದಿಗಳಿಗೆ ಬಿಟ್ಟು ಕೊಟ್ಟಿದ್ದಾರೆ. ಇದರಲ್ಲಿ ಮುಸ್ಲಿಮ್ ಜನಸಾಮಾನ್ಯರ ಪಾತ್ರವೇನೂ ಇಲ್ಲ, ಎಲ್ಲಾ ತಪ್ಪು ಅವರ ತಲೆಗೆ ಧರ್ಮದ ಈ ಸಂಕುಚಿತ ಕಲ್ಪನೆಯನ್ನು ತುರುಕಿಸಿದವರದ್ದಾಗಿದೆ. ಈಗ ಅಲ್ಲಾಹನ ಅನುಗ್ರಹದಿಂದ ಇಸ್ಲಾಮೀ ಆಂದೋಲನಗಳು ಜಗತ್ತಿನಾದ್ಯಂತ ಈ ತಪ್ಪು ಕಲ್ಪನೆಯನ್ನು ನೀಗಿಸುವಲ್ಲಿ ಹೆಚ್ಚಿನಂಶ ಯಶಸ್ವಿಯಾಗಿವೆ. ಈಗ ಮುಸ್ಲಿಮರು ಇಸ್ಲಾಮನ್ನು ಇಡೀ ಜೀವನದ ಸಂಪೂರ್ಣ ವ್ಯವಸ್ಥೆ ಮತ್ತು ಕಾನೂನೆಂದು ಭಾವಿಸತೊಡಗಿದ್ದಾರೆ. ಕುರ್‌ಆನಿನ ಸೂಕ್ತಗಳ ಮತ್ತು ಪ್ರವಾದಿ(ಸ) ಅವರ ಹದೀಸ್‌ಗಳ ಆಧಾರದಲ್ಲಿ ಅವರು ಜೀವನದ ಉದ್ದೇಶವೇನು ಮತ್ತು ಗುರಿ ಯಾವುದು ಹಾಗೂ ಅವರ ಎಲ್ಲ ಪ್ರಯತ್ನ-ಪರಿಶ್ರಮಗಳ ಕೇಂದ್ರ ಯಾವುದಾಗಿರಬೇಕೆಂಬುದನ್ನು ಅವರಿಗೆ ಮನವರಿಕೆ ಮಾಡಿಕೊಡಲಾಗುತ್ತದೆ.

## ಕುರ್‌ಆನಿನ ಆಧಾರಗಳು:

'ಇಕಾಮತುದ್ದೀನ್' ಅಥವಾ ಧರ್ಮ ಸಂಸ್ಥಾಪನೆಯ ಕಾರ್ಯವು ಮುಸಲ್ಮಾನರ ಮೇಲೆ ಕಡ್ಡಾಯವಾಗಿದೆಯೆಂಬುದಕ್ಕೆ ಕುರ್‌ಆನಿನಲ್ಲಿ ಅನೇಕ ಆಧಾರಗಳಿವೆ. ಅವುಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ಕೊಡಲಾಗಿದೆ. ಅವು 10 ಅಂಶಗಳಲ್ಲಿವೆ.

1. ಆದಿಪಿತ ಆದಮ್(ಅ) ಅವರ ಸೃಷ್ಟಿ ಹಾಗೂ ಅವರನ್ನು ಈ ಲೋಕಕ್ಕೆ ಕಳಿಸಿರುವುದರ ಉದ್ದೇಶ.

2. ಮುಹಮ್ಮದ್(ಸ) ಅವರನ್ನು ಪ್ರವಾದಿ ಹಾಗೂ ಸಂದೇಶವಾಹಕರಾಗಿ ಮಾಡುವ ಉದ್ದೇಶ.

3. ಕುರ್‌ಆನ್ ಮತ್ತು ಅದಕ್ಕೆ ಮುಂಚಿನ ಗ್ರಂಥಗಳನ್ನು ಅವತೀರ್ಣಗೊಳಿಸಿರುವುದರ ಉದ್ದೇಶ.

4. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ವಿರುದ್ಧ ವಿಧಿಸುವವರು ಮತ್ತು ತೀರ್ಪು ನೀಡುವವರು ಕಾಫಿರ್, ಝಾಲಿಮ್ ಮತ್ತು ಫಾಸಿಕ್‌ಗಳಾಗಿದ್ದಾರೆ.

5. ಕಳ್ಳನಿಗೆ ಕೈ ಕಡಿಯುವ ಮತ್ತು ವ್ಯಭಿಚಾರಿಗೆ ಕಲ್ಲೇಟಿನ ಶಿಕ್ಷೆ ವಿಧಿಸುವ ಆಜ್ಞೆಗಳು.

6. 'ಇಕಾಮತುದ್ದೀನ್' ಎಂಬ ಹೆಸರಲ್ಲಿ ಕುರ್‌ಆನಿನ ಸ್ಪಷ್ಟ ಆದೇಶ.

7. ಇಸ್ಲಾಮಿನ ಪ್ರಾಬಲ್ಯಕ್ಕಾಗಿ ಪರಿಶ್ರಮಿಸುವವರಿಗೆ ಸಹಾಯದ ವಾಗ್ದಾನ.

8. ಈ ಪರಿಶ್ರಮದಲ್ಲಿ ಸಂಪತ್ತು ಖರ್ಚು ಮಾಡದೆ, ಅದರಿಂದ ನುಣುಚಿಕೊಳ್ಳುವವರ ಕುರಿತ ವಿಧಿ.

9. ಮಾನವರು ಮತ್ತು ಜಿನ್ನ್‌ಗಳ ಸೃಷ್ಟಿಯ ಉದ್ದೇಶ.

10. ಮುಸ್ಲಿಮ್ ಸಮುದಾಯದ ಜೀವನೋದ್ದೇಶ.

ಈ ಎಲ್ಲ ಹತ್ತು ಅಂಶಗಳೂ ಇಸ್ಲಾಮ್ ಧರ್ಮದ ಪ್ರಾಬಲ್ಯಕ್ಕಾಗಿ ಪರಿಶ್ರಮಿಸುವುದು,

ಅದನ್ನು ಸಂಸ್ಥಾಪಿಸುವುದು ಮತ್ತು ಕುರ್‌ಆನಿನಲ್ಲಿ ನೀಡಲಾಗಿರುವ ಕಾನೂನು(ವಿಧಿ-ನಿಷೇಧ)ಗಳನ್ನು ಜಾರಿಗೊಳಿಸುವುದು ಮುಸಲ್ಮಾನರ ಹೊಣೆಗಾರಿಕೆಯಾಗಿದ್ದು ಅದು ಅವರ ಜೀವನದ ಕಡ್ಡಾಯ ಕರ್ತವ್ಯವೆಂಬುದಕ್ಕೆ ಪ್ರಬಲ ಆಧಾರವಾಗಿದೆಯೆಂಬುದನ್ನು ಪ್ರಸ್ತುತ ಪಡಿಸುತ್ತದೆ. ಈಗ ಒಂದೊಂದನ್ನೇ ವಿಶ್ಲೇಷಿಸೋಣ.

## ಆಧಾರ- 1 :

## ಆದಿಪಿತ ಆದಮ್(ಅ) ಅವರ ಸೃಷ್ಟಿ ಮತ್ತು ಅವರನ್ನು ಈ ಲೋಕಕ್ಕೆ ಕಳುಹಿಸಿರುವುದರ ಉದ್ದೇಶ:

ಆದಮ್(ಅ)ರನ್ನು ಏಕೆ ಸೃಷ್ಟಿಸಲಾಯಿತು. ಅವರ ಸ್ಥಾನಮಾನ ಏನಾಗಿತ್ತು ಮತ್ತು ಅವರನ್ನು ಈ ಲೋಕಕ್ಕೆ ಏಕೆ ಕಳಿಸಲಾಯಿತು ಎಂಬುದನ್ನು ಮೊತ್ತ ಮೊದಲು ತಿಳಿಯಬೇಕಾಗಿದೆ. ಅವರು ಈ ಲೋಕದ ಆದಿಮಾನವರಾಗಿದ್ದರು, ಮಾತ್ರವಲ್ಲ ಅವರು ಅಲ್ಲಾಹನ ಪ್ರಪ್ರಥಮ ಪ್ರವಾದಿಯಾಗಿದ್ದರೆಂದು ನಾವು ಬಲ್ಲೆವು. ಆದ್ದರಿಂದ ಅವರನ್ನು ಈ ಲೋಕಕ್ಕೆ ಕಳುಹಿಸಿರುವ ಉದ್ದೇಶವು ಜೀವನದ ಅತ್ಯಂತ ಪ್ರಧಾನ ಕರ್ತವ್ಯವಾಗಿರಲೇ ಬೇಕು ಎಂಬುದರಲ್ಲಿ ಸಂದೇಹವೇ ಇಲ್ಲ.

ಅಲ್‌ಬಕರಃ ಅಧ್ಯಾಯದ 30 ರಿಂದ 39ರ ವರೆಗಿನ ಸೂಕ್ತಗಳಲ್ಲಿ ಆದಮ್(ಅ)ರ ಸೃಷ್ಟಿಯ ಉದ್ದೇಶ, ಅವರ ನೈಜ ನೆಲೆ ಹಾಗೂ ಅವರನ್ನು ಈ ಲೋಕಕ್ಕೆ ಕಳುಹಿಸುವಾಗ ನೀಡಿದ ಮಾರ್ಗದರ್ಶನವನ್ನು ಸವಿಸ್ತಾರ ವಿವರಿಸಲಾಗಿದೆ. ಅಲ್ಲಾಹನು ಅವರನ್ನು ತನ್ನ ಖಿಲಾಫತ್ ಅಥವಾ ಪ್ರತಿನಿಧಿತ್ವದ ಅತ್ಯುನ್ನತ ಹೊಣೆ ನಿರ್ವಹಿಸಲಿಕ್ಕಾಗಿ ಕಳುಹಿಸಿರುವನೆಂದು ಹೇಳಲಾಗಿದೆ. ಅವರು ಇಲ್ಲಿ ಅಲ್ಲಾಹನ ಖಲೀಫ ಅಥವಾ ಪ್ರತಿನಿಧಿಯಾಗಿದ್ದರು.

ಖಿಲಾಫತ್‌ನ ಸೂಕ್ತವನ್ನು ವ್ಯಾಖ್ಯಾನಿಸುತ್ತಾ ಮೌಲಾನಾ ಸದ್ರುದ್ದೀನ್ ಇಸ್ಲಾಹಿಯವರು ಹೀಗೆ ಬರೆಯುತ್ತಾರೆ- ಒಂದು ದೇಶದ ಒಡೆಯನು ತನ್ನ ಅಧಿಕಾರಗಳನ್ನು ಒಬ್ಬನಿಗೆ ವಹಿಸಿಕೊಟ್ಟಾಗ ಅವನ ಪ್ರತಿನಿಧಿಯೆಂಬ ನೆಲೆಯಲ್ಲಿ ಅದನ್ನು ಬಳಸುವವನನ್ನು ಖಲೀಫ ಎನ್ನಲಾಗುತ್ತದೆ. ಖಲೀಫ ಒಡೆಯನಾಗಿರುವುದಿಲ್ಲ, ನೈಜ ಒಡೆಯನ ಪ್ರತಿನಿಧಿಯಾಗಿರುತ್ತಾನೆ. ಅವನ ಅಧಿಕಾರಗಳು ಅವನ ಸ್ವಂತದ್ದಾಗಿರುವುದಿಲ್ಲ, ಒಡೆಯನು ವಹಿಸಿಕೊಟ್ಟದ್ದಾಗಿರುತ್ತದೆ. ಅವನಿಗೆ ತನ್ನಿಚ್ಛೆಯಂತೆ ಕೆಲಸ ಮಾಡುವ ಅಧಿಕಾರವಿರುವುದಿಲ್ಲ, ಅವನು ಒಡೆಯನ ಅಭೀಷ್ಟವನ್ನು ಈಡೇರಿಸುವವನಾಗಿರುತ್ತಾನೆ. ಅವನು ತನ್ನನ್ನೇ ಒಡೆಯನೆಂದು ಬಗೆದು ತನಗೆ ವಹಿಸಿಕೊಡಲಾದ ಅಧಿಕಾರಗಳನ್ನು ಮನಬಂದಂತೆ ದುರುಪಯೋಗಿಸಿದರೆ ಅಥವಾ ನೈಜ ಒಡೆಯನ ಹೊರತು ಇನ್ನೊಬ್ಬನನ್ನು ಒಡೆಯನೆಂದು ಅಂಗೀಕರಿಸಿ ಅವನ ಅಭೀಷ್ಟಗಳನ್ನು ಈಡೇರಿಸುತ್ತಾ ಅವನ ಆಜ್ಞೆ-ಆದೇಶಗಳನ್ನು ಪಾಲಿಸ ತೊಡಗಿದರೆ ಅವನನ್ನು ಕೃತಘ್ನ, ವಿದ್ರೋಹಿ ಮತ್ತು ಬಂಡುಕೋರನೆಂದು ಪರಿಗಣಿಸಲಾಗುವುದು.

ಮಾನವನು ಈ ಭೂಮಿಯಲ್ಲಿ ದೇವನ ಖಲೀಫ ಆಗಿದ್ದಾನೆಂದು ಈ ಸೂಕ್ತವು ಸಾರುತ್ತದೆ. ಖಿಲಾಫತ್‌ನ ಈ ಪದವಿಯನ್ನು ಅವನ ಹೊರತು ಇತರ ಯಾವ ಜೀವಿಗೂ ನೀಡಲಾಗಿಲ್ಲ. ಆದ್ದರಿಂದಲೇ ಅಲ್ಲಾಹನು ತನ್ನ ಅನುಗ್ರಹಗಳ ಪೈಕಿ ಈ ಒಂದು ಅನುಪಮ ಅನುಗ್ರಹವನ್ನು ವಿಶಿಷ್ಟ ರೀತಿಯಲ್ಲಿ ಪ್ರಸ್ತಾಪಿಸಿದ್ದಾನೆ. ದೇವಚರರ ಮುಂದೆ ಆದಮರನ್ನು ಸೃಷ್ಟಿಸುವ ಕುರಿತು ತನ್ನ ಇಂಗಿತವನ್ನು ತಿಳಿಸುವ ಮೊದಲೇ, ಖಿಲಾಫತ್‌ನ ಹೆಸರೆತ್ತಿ ಪ್ರಸ್ತಾಪಿಸಿರುವುದು ಅದರ ಅಸಾಮಾನ್ಯ ಮಹತ್ವವನ್ನು ಸೂಚಿಸುತ್ತದೆ. ಮಾನವನ ಈ ಶ್ರೇಷ್ಠತೆಗಿಂತ ಉನ್ನತವಾದ ಒಂದು ಕಲ್ಪನೆಯನ್ನು ಊಹಿಸಲೂ ಸಾಧ್ಯವಿಲ್ಲ. ಆದರೆ ಮಾನವನು ತನಗೆ ವಹಿಸಿಕೊಡಲಾದ ಸೃಷ್ಟಿಗಳ ಮುಂದೆಯೇ ತಲೆಬಾಗುವ ಮೂಲಕ ತನ್ನನ್ನೇ ಅಪಮಾನಿಸುತ್ತಿರುವುದು ಬಹಳ ದೊಡ್ಡ ದುರಂತ! ಅದೇ ರೀತಿ ತನ್ನ ನೈಜ ಒಡೆಯನ ಆಜ್ಞೆಯನ್ನು ಧಿಕ್ಕರಿಸಿ ತನ್ನ ಮನಬಂದ ರೀತಿಯಲ್ಲಿ ಜೀವನ ಸಾಗಿಸುವುದು ಆತ್ಮ ವಂಚನೆ, ಮೋಸ ಮತ್ತು ದ್ರೋಹವಾಗಿದೆ.

ಆದ್ದರಿಂದ ಮಾನವನ ವಾಸ್ತವಿಕತೆ ಮತ್ತು ಪ್ರಪಂಚದಲ್ಲಿ ಅವನ ನೈಜ ಸ್ಥಾನವನ್ನು ಸರಿಯಾಗಿ ವಿವರಿಸಲಾಗಿದೆ. ಯಾವುದೇ ಇತರ ಮೂಲಗಳಿಂದ ಸಿಗಲು ಸಾಧ್ಯವಿಲ್ಲದಂತಹ ಮಾನವ ಕುಲದ ಇತಿಹಾಸವನ್ನು ಪ್ರಸ್ತುತಡಿಸಲಾಗಿದೆ. ಇದರ ಫಲಿತಾಂಶವು, ಮಾನವನು ಭೂಮಿಯ ಅಡಿಯಿಂದ ಎಲುಬು, ಮೂಳೆಗಳನ್ನು ಸಂಗ್ರಹಿಸಿ, ಅವುಗಳಿಗೆ ಊಹೆಯ ಆಧಾರದಲ್ಲಿ ರೂಪ ಕೊಡಲು ಮಾಡುವ ಪ್ರಯತ್ನಕ್ಕಿಂತ ಎಷ್ಟೋ ಪಟ್ಟು ಹೆಚ್ಚು ಮೌಲ್ಯಯುತವೂ ಫಲಕಾರಿಯೂ ಆಗಿದೆ. (ತೈಸೀರುಲ್ ಕುರ್‌ಆನ್)

'ಖಲೀಫ' ಅಂದರೆ ಭೂಮಿಯಲ್ಲಿ ಅಲ್ಲಾಹನ ಶರೀಅತ್(ಧರ್ಮಶಾಸ್ತ್ರ)ನ ಆಧಿಪತ್ಯವನ್ನು ಸ್ಥಾಪಿಸುವವನಾಗಿದ್ದಾನೆ ಎಂದು ಮೌಲಾನಾ ಅಬ್ದುಲ್ ಮಾಜಿದ್ ದರ್ಯಾಬಾದಿಯವರು ತನ್ನ ತಫ್ಸೀರ್ ಮಾಜಿದಿಯಲ್ಲಿ ಬರೆಯುತ್ತಾರೆ.

ಹಳೆಯ ಕಾಲದ ನಮ್ಮ ವ್ಯಾಖ್ಯಾನಕಾರರು ಈ ಕುರಿತು ಬರೆದಿರುವುದನ್ನು ನೋಡಿರಿ.

ಇಮಾಮ್ ಬಗವೀ: ಆದಮರು(ಅ) ಭೂಮಿಯಲ್ಲಿ ಅಲ್ಲಾಹನ ಆಜ್ಞೆಗಳನ್ನು ಸಂಸ್ಥಾಪಿಸಲಿಕ್ಕಾಗಿ ಮತ್ತು ಅವನ ತೀರ್ಮಾನಗಳನ್ನು ಜಾರಿಗೊಳಿಸಲಿಕ್ಕಾಗಿ ನೇಮಕಗೊಂಡಿದ್ದ ಆತನ ಖಲೀಫರಾಗಿದ್ದರೆಂಬುದೇ ಸರಿ. (ತಫ್ಸೀರ್ ಮುಆಲಿಮುತ್ತನ್ಸೀಲ್)

ತಫ್ಸೀರ್ ಖಾಝಿನ್‌ನ ಈ ವಾಕ್ಯಗಳು ಅದನ್ನು ಸಮರ್ಥಿಸುತ್ತದೆ- ಆದಮ್(ಅ) ಅಲ್ಲಾಹನ ಭೂಮಿಯಲ್ಲಿ ಆತನ ಮೇರೆಗಳನ್ನು ನಿರ್ಣಯಿಸಲು ಮತ್ತು ಅವನ ತೀರ್ಮಾನಗಳನ್ನು ಜಾರಿಗೊಳಿಸಲು ಅಲ್ಲಾಹನ ಖಲೀಫರಾಗಿದ್ದರು.

ತಫ್ಸೀರ್ ಜಲಾಲೈನ್: ನನ್ನ ಆಜ್ಞೆಗಳನ್ನು ಜಾರಿಗೊಳಿಸುವಲ್ಲಿ ನನ್ನ ಪ್ರತಿನಿಧಿಯಾಗಿ (ಖಲೀಫ)ದ್ದಾರೆ ಆದಮ್(ಅ).

ತಫ್ಸೀರ್ ಬೈದಾವಿ: ಖಲೀಫ ಇನ್ನೊಬ್ಬನ ಬದಲಿ ಹಾಗೂ ಪ್ರತಿನಿಧಿಯಾಗಿರುತ್ತಾನೆ. ಅದು ಆದಮ್(ಅ) ಆಗಿದ್ದಾರೆ. ಏಕೆಂದರೆ ಅವರು ಭೂಮಿಯಲ್ಲಿ ಅಲ್ಲಾಹನ ಪ್ರತಿನಿಧಿಯಾಗಿದ್ದರು.

ಅದೇ ರೀತಿ, ಜನರ ವ್ಯವಹಾರಗಳನ್ನು ಸರಿಪಡಿಸಲು ಮತ್ತು ಅವನ ಕಾನೂನುಗಳನ್ನು ಅವರ ಮೇಲೆ ಜಾರಿಗೊಳಿಸಲು ಅಲ್ಲಾಹನು ಇತರೆಲ್ಲ ಪ್ರವಾದಿಗಳನ್ನು ಕಳಿಸಿದ್ದನು. ಇದು ಅವನಿಗೆ ಪ್ರತಿನಿಧಿಯ ಅಗತ್ಯವಿದೆಯೆಂಬ ಕಾರಣಕ್ಕಾಗಿ ಅಲ್ಲ. ಜನರಿಗೆ ಅವನಿಂದ ಆದೇಶಗಳನ್ನೂ ಅನುಗ್ರಹಗಳನ್ನೂ ನೇರವಾಗಿ ಪಡೆಯುವ ಸಾಮರ್ಥ್ಯ ಇಲ್ಲದಿರುವುದರಿಂದಾಗಿದೆ.

''ರೂಹುಲ್‌ಮಆನಿ''ಯ ಆರಂಭ ಹೀಗಿದೆ: ಆದಮರು ಭೂಮಿಯಲ್ಲಿ ಅಲ್ಲಾಹನ ಪ್ರತಿನಿಧಿಯಾಗಿದ್ದರು. ಇತರೆಲ್ಲ ಪ್ರವಾದಿಗಳೂ ಕೂಡಾ ಅವರಂತೆಯೇ ಅಲ್ಲಾಹನ ಪ್ರತಿನಿಧಿಗಳಾಗಿದ್ದರು.

ಈ ಎಲ್ಲ ವ್ಯಾಖ್ಯಾನಕಾರರ ಪ್ರಕಾರ, ಆದಮರಿಗೆ ಮಾತ್ರವಲ್ಲ, ಇತರೆಲ್ಲ ಪ್ರವಾದಿಗಳಿಗೂ ಭೂಮಿಯಲ್ಲಿ ಖಿಲಾಫತ್ ನೀಡಲಾಗಿತ್ತು. ಭೂಮಿಯ ಸುವ್ಯವಸ್ಥೆ, ಜನರ ಎಲ್ಲ ವ್ಯವಹಾರಗಳನ್ನು ವ್ಯವಸ್ಥಿತಗೊಳಿಸುವುದು, ಅವರನ್ನು ಸಂಸ್ಕರಿಸುವುದು ಹಾಗೂ ಅಲ್ಲಾಹನ ಆದೇಶಗಳನ್ನು ಜಾರಿಗೊಳಿಸುವುದು ಮತ್ತು ಅವನ ವಿಧಿ-ನಿಷೇಧಗಳನ್ನು ಜಾರಿಗೆ ತರುವುದು ಇದರ ಉದ್ದೇಶವಾಗಿದೆ. ಈ ವಿವರಣೆಗಳಲ್ಲಿ ನಾನು ಮೇಲೆ ಉದ್ಧರಿಸಿದ 'ಇಕಾಮತುದ್ದೀನ್'ನ ತಾತ್ಪರ್ಯಕ್ಕಿಂತ ಹೆಚ್ಚಿನದ್ದೇನಾದರೂ ಇದೆಯೇ? ಮಾನವ ಜೀವನದ ಯಾವ ವಿಭಾಗವು ವ್ಯಾಖ್ಯಾನಕಾರರು ವಿವರಿಸಿದ ಈ ನಾಲ್ಕು ಅಂಶಗಳ ವಲಯದಿಂದ ಹೊರಗಿದೆ? 'ಇಕಾಮತುದ್ದೀನ್' ಮುಸಲ್ಮಾನರ ಕಡ್ಡಾಯ ಕರ್ತವ್ಯವೆಂಬುದಕ್ಕೆ ಇದಕ್ಕಿಂತ ದೊಡ್ಡ ಆಧಾರ ಏನಿದೆ? ಮಾನವನ ಸೃಷ್ಟಿಯ ಉದ್ದೇಶ ಮತ್ತು ಅವನ ಅಸ್ತಿತ್ವದ ಧ್ಯೇಯವಾಗಿರುವ ಈ ಕಾರ್ಯವು ಕಡ್ಡಾಯವಾಗದಿದ್ದರೆ ಬೇರೆ ಯಾವ ವಿಷಯ ಕಡ್ಡಾಯವಾಗಬೇಕು?

ಅಲ್‌ಬಕರಃದ 30ನೇ ಸೂಕ್ತದಲ್ಲಿರುವ 'ಖಲೀಫ' ಎಂಬ ಪದ 'ಸಾದ್' ಅಧ್ಯಾಯದಲ್ಲಿ ಬಂದಿದೆ. (ಸೂಕ್ತ: 2) ಈ ಸೂಕ್ತದಲ್ಲಿ ಅಲ್ಲಾಹನು ದಾವೂದ್(ಅ)ರನ್ನು 'ಖಲೀಫ' ಎಂದು ಸ್ಪಷ್ಟವಾಗಿ ಸಾರಿದ್ದಾನೆ. ಅಲ್ಲಾಹನು ಅವತೀರ್ಣಗೊಳಿಸಿದ ನೀತಿ-ನ್ಯಾಯದ ಕಾನೂನಿನಂತೆ ಆಡಳಿತ ನಡೆಸುವುದು ಮತ್ತು ವಿವಾದಗಳಲ್ಲಿ ತೀರ್ಪು ನೀಡುವುದು ಎಂದು ಅದರ ಉದ್ದೇಶವನ್ನು ಆತನು ಸ್ಪಷ್ಟಪಡಿಸಿದ್ದಾನೆ. ಸೃಷ್ಟಿಯ ಉದ್ದೇಶದ ದೃಷ್ಟಿಯಿಂದ ಪ್ರತಿಯೊಬ್ಬ ಮಾನವನೂ ದೇವನ ಖಲೀಫ ಆಗಿದ್ದಾನೆ. ಆದರೆ ಇಷ್ಟು ದೊಡ್ಡ ಪದವಿಗೆ ತಕ್ಕಂತೆ ಅವನ ಗುಣಗಳಿರಬೇಕಾದುದು ಕಡ್ಡಾಯ. ಪ್ರಾತಿನಿಧ್ಯದ ಹೊಣೆಗಾರಿಕೆಗಳನ್ನು ಪ್ರಾಮಾಣಿಕವಾಗಿ ಈಡೇರಿಸುವವರಿಗೆ ಮಾತ್ರ ಈ ಪದವಿಯನ್ನು ಪಡೆಯುವ ಅರ್ಹತೆಯಿದೆ. ಇದನ್ನು ಈಡೇರಿಸದವರು ಅಲ್ಲಾಹನ ಪ್ರತಿನಿಧಿಗಳಾಗಲಾರರು. ಅವರು ಬಂಡುಕೋರರೂ ವಿದ್ರೋಹಿಗಳೂ ಆಗಿದ್ದಾರೆ. ವಿಶ್ವಾಸಿಗಳಾದ ಸಜ್ಜನರು ಮಾತ್ರ ಈ ಖಿಲಾಫತ್‌ಗೆ ಅರ್ಹರಾಗಿರುವಾಗ, ಬಂಡುಕೋರರೂ ವಿದ್ರೋಹಿಗಳೂ ಆದವರನ್ನು ವಿನಾಶದ ಕೂಪದಿಂದ ಕೈ ಹಿಡಿದೆತ್ತಿ ಆ ಉನ್ನತ ಸ್ಥಾನಕ್ಕೆ ತಲಪಿಸಲು ಪ್ರಯತ್ನಿಸಬೇಕಾದುದು ಆ ಸ್ಥಾನದ ಬೇಡಿಕೆಯಾಗಿದೆ. ಆ ಬೇಡಿಕೆಯನುಸಾರ, ಅಲ್ಲಾಹನ ನಿಷ್ಠ ದಾಸರಿಗೆ ವಹಿಸಿಕೊಡಲಾಗಿರುವ ಹೊಣೆಗಾರಿಕೆಯ ಆಧಾರದಲ್ಲಿ ಆತನ ಪ್ರಾತಿನಿಧ್ಯದ

ಸಿದ್ಧಾಂತದ ಮೇಲೆ ಒಂದು ವ್ಯವಸ್ಥೆಯನ್ನು ಸ್ಥಾಪಿಸಬೇಕಾಗಿದೆಯೆಂದು ಮೇಲಿನ ವಿವರಣೆಯಿಂದ ಸ್ಪಷ್ಟವಾಗುತ್ತದೆ. ಅದರ ಹೊರತು ಈ ಹೊಣೆಗಾರಿಕೆಯನ್ನು ಈಡೇರಿಸಲು ಸಾಧ್ಯವೇ ಇಲ್ಲ.

## ಆಧಾರ: 2

## ಮುಹಮ್ಮದ್(ಸ) ಅವರನ್ನು ಪ್ರವಾದಿ ಹಾಗೂ ಸಂದೇಶವಾಹಕರಾಗಿ ಮಾಡುವ ಉದ್ದೇಶ:

ಸತ್ಯ ಧರ್ಮವನ್ನು ಇತರೆಲ್ಲ ಮಿಥ್ಯ ಸಿದ್ಧಾಂತಗಳು ಮತ್ತು ಧರ್ಮಗಳ ಮೇಲೆ ಪ್ರಾಬಲ್ಯ ಸಾಧಿಸಲಿಕ್ಕಾಗಿ ಪ್ರವಾದಿ ಮುಹಮ್ಮದ್‌ರನ್ನು(ಸ) ಕಳುಹಿಸಲಾಗಿತ್ತು. ಅದನ್ನು ಅತ್ತೌಬಃ ಅಧ್ಯಾಯದ ಸೂಕ್ತ 3, ಸೂರಃ ಅಸ್ಸಫ್ಫ್‌ನ ಸೂಕ್ತ 9 ಮತ್ತು ಸೂರಃ ಅಲ್‌ಫತಹ್‌ನ 28ನೇ ಸೂಕ್ತಗಳಲ್ಲಿ ಸ್ಪಷ್ಟಪಡಿಸಲಾಗಿದೆ. ಇಲ್ಲಿ ನಾನು ಸೂರಃ ಅಲ್‌ಫತಹ್‌ನ 28ನೇ ಸೂಕ್ತವನ್ನು ಉದ್ಧರಿಸುತ್ತೇನೆ.

**''ತನ್ನ ಸಂದೇಶವಾಹಕನನ್ನು ಸನ್ಮಾರ್ಗ ಹಾಗೂ ಸತ್ಯಧರ್ಮದೊಂದಿಗೆ ಕಳುಹಿಸಿದವನು ಅಲ್ಲಾಹನೇ ಆಗಿರುತ್ತಾನೆ. ಅದನ್ನು ಸಕಲ ಧರ್ಮಗಳ ಮೇಲೆ ಪ್ರಬಲಗೊಳಿಸಲಿಕ್ಕಾಗಿ (ಅವನು ಹೀಗೆ ಮಾಡಿರುವನು). ಈ ವಸ್ತುಸ್ಥಿತಿಯ ಬಗ್ಗೆ ಅಲ್ಲಾಹನ ಸಾಕ್ಷ್ಯವೇ ಸಾಕು.''**

(ಸೂರಃ ಅಲ್‌ಫತಹ್: 28)

ತನ್ನ ಸಂದೇಶ ವಾಹಕನನ್ನು ಸನ್ಮಾರ್ಗ ಮತ್ತು ಸತ್ಯ ಧರ್ಮದೊಂದಿಗೆ ಕಳುಹಿಸಿದವನು ಅಲ್ಲಾಹನೇ ಆಗಿರುತ್ತಾನೆ. ಸಕಲ ಧರ್ಮಗಳ ಮೇಲೆ ಅದನ್ನು ಪ್ರಬಲಗೊಳಿಸಲಿಕ್ಕಾಗಿ.

ಮೊದಲೆರಡು ಸೂಕ್ತಗಳ ಕೊನೆಯಲ್ಲಿ, ಬಹುದೇವ ವಿಶ್ವಾಸಿಗಳಿಗೆ ಇದು ಎಷ್ಟೇ ಅಪ್ರಿಯವಾದರೂ ಸರಿ ಎಂದಿದ್ದರೆ ಪ್ರಸ್ತುತ ಸೂಕ್ತ ಕೊನೆಯಲ್ಲಿ, ಈ ವಸ್ತುಸ್ಥಿತಿಯ ಬಗೆಗೆ ಅಲ್ಲಾಹನ ಸಾಕ್ಷ್ಯವೇ ಸಾಕು ಎಂದಿದೆ. ಮೊದಲೆರಡು ಸೂಕ್ತಗಳಲ್ಲಿ ಮುಶ್ರಿಕರಿಗೆ ಮತ್ತು ಕಾಫಿರರಿಗೆ ಎಷ್ಟೇ ಅಪ್ರಿಯವಾದರೂ ನಾವಂತೂ ನಮ್ಮ ಸಂದೇಶವಾಹಕನನ್ನು ಇದೇ ಉದ್ದೇಶಕ್ಕಾಗಿ ಕಳುಹಿಸಿದ್ದೇವೆ ಎಂದಿದ್ದರೆ, ಅಲ್‌ಫತಹ್‌ನ ಸೂಕ್ತದಲ್ಲಿ ಮುಹಮ್ಮದ್‌ರ(ಸ) ನೇಮಕದ ಕುರಿತು ಅಲ್ಲಾಹನ ಸಾಕ್ಷ್ಯವೇ ಸಾಕು ಎಂದಿದೆ. ಇನ್ನು ಇಡೀ ಪ್ರಪಂಚವೇ ಒಂದಾಗಿ ಮುಹಮ್ಮದ್‌ರ ನೇಮಕದ ಉದ್ದೇಶ ಅದಾಗಿರಲಿಲ್ಲವೆಂದು ಹೇಳಿದರೂ ಅದು ಒಪ್ಪತಕ್ಕದ್ದಲ್ಲ.

ಸೂರಃ ಅತ್ತೌಬಃದ 33ನೇ ಸೂಕ್ತವನ್ನು ವ್ಯಾಖ್ಯಾನಿಸುತ್ತಾ ಸೈಯದ್ ಮೌದೂದಿ(ರ) ಯವರು ಹೀಗೆ ಬರೆಯುತ್ತಾರೆ... ಜೀವನ ವ್ಯವಸ್ಥೆ ಅಥವಾ ಜೀವನ ಕ್ರಮಕ್ಕೆ ಅರಬಿ ಭಾಷೆಯಲ್ಲಿ 'ದೀನ್' (ಧರ್ಮ) ಎಂಬ ಪದವನ್ನು ಬಳಸಲಾಗುತ್ತದೆ. ಅದನ್ನು ಸಂಸ್ಥಾಪಿಸುವವರನ್ನು ಪ್ರಾಮಾಣಿಕ ಹಾಗೂ ಅನುಸರಣಾರ್ಹರೆಂದು ಒಪ್ಪಿಕೊಂಡು ಅವರನ್ನು ಅನುಸರಿಸಬೇಕು. ಆದುದರಿಂದ ಸಂದೇಶವಾಹಕರ ನೇಮಕದ ಉದ್ದೇಶವು ಈ ಸೂಕ್ತದಲ್ಲಿ ತಿಳಿಸಲಾಗಿರುವಂತೆ ಯಾವ ಸನ್ಮಾರ್ಗದರ್ಶನ ಹಾಗೂ ಸತ್ಯಧರ್ಮವನ್ನು ಅವರು ದೇವನ ವತಿಯಿಂದ ತಂದಿರುವರೋ ಅದನ್ನು ಧರ್ಮದ ವ್ಯಾಖ್ಯೆಯಲ್ಲಿ ಸೇರುವ ಸಕಲ ಪದ್ಧತಿ ಹಾಗೂ ವ್ಯವಸ್ಥೆಗಳ

ಮೇಲೆ ಪ್ರಬಲಗೊಳಿಸಬೇಕೆಂಬುದೇ ಆಗಿದೆ. ಇನ್ನೊಂದು ರೀತಿಯಲ್ಲಿ ಹೇಳುವುದಾದರೆ, ಪ್ರವಾದಿಯವರು(ಸ) ತಂದಿರುವ ಜೀವನ ವ್ಯವಸ್ಥೆಯು ಇತರ ಜೀವನ ವ್ಯವಸ್ಥೆಗಳ ಅಧೀನವಾಗಬಾರದು. ಅವುಗಳಿಂದ ಪರಾಜಿತವಾಗಬಾರದು. ಅವು ನೀಡುವ ವಿನಾಯಿತಿ ಮತ್ತು ಸೌಲಭ್ಯಗಳಿಗೆ ಸೀಮಿತವಾಗಬಾರದು, ಇದು ಪ್ರವಾದಿಯ ಕಾರ್ಯಭಾರದ ಧ್ಯೇಯವಲ್ಲ, ಅವರು ಭೂಮ್ಯಾಕಾಶಗಳ ಅಧಿಪತಿಯಾದ ಅಲ್ಲಾಹನ ಪ್ರತಿನಿಧಿಯಾಗಿ ಬಂದಿದ್ದಾರೆ. ತಮ್ಮ ಪ್ರಭುವಿನ ಸತ್ಯ ವ್ಯವಸ್ಥೆಯು ಪ್ರಬಲವಾಗುವುದನ್ನು ನೋಡಬಯಸುತ್ತಾರೆ. ಜಗತ್ತಿನಲ್ಲಿ ಒಂದು ವೇಳೆ ಇತರ ವ್ಯವಸ್ಥೆಗಳಿದ್ದರೂ ಅವು ದೇವ ವ್ಯವಸ್ಥೆಯು ನೀಡುವ ಸೌಲಭ್ಯಗಳ ಮಿತಿಯೊಳಗಿರಬೇಕು. ಉದಾ: 'ಜಿಝಿಯಾ' (ರಕ್ಷಣಾಕರ) ದಿಮ್ಮಿಗಳ ಜೀವನ ವ್ಯವಸ್ಥೆಗೆ ಅವಕಾಶವಿರುವಂತೆ. (ತಫ್ಹೀಮುಲ್ ಕುರ್‌ಆನ್- ಸಂಪುಟ-4 ಸೂರಃ ಅಹ್‌ಝಾಬ್:32)

ಪ್ರವಾದಿಯವರ(ಸ) ನೇಮಕದ ಉದ್ದೇಶವನ್ನು ಶಾಹ್ ವಲಿಯುಲ್ಲಾ ದೆಹ್ಲವಿಯವರು ತನ್ನ 'ಹುಜ್ಜತುಲ್ಲಾಹಿಲ್ ಬಾಲಿಗ' ಮತ್ತು 'ಇಝಾಲತುಲ್ ಖಫಾ' ಎಂಬ ಗ್ರಂಥಗಳಲ್ಲಿ ಪದೇ ಪದೇ ವಿವರಿಸಿದ್ದಾರೆ. ಅಲ್ಲಾಹನು ಬಂಡುಕೋರ ಮತ್ತು ಉದ್ಧಟ ಜನಾಂಗಗಳನ್ನು ಸೋಲಿಸಿ ಹೇಗೆ ನಾಶಪಡಿಸುತ್ತಾನೆಂಬ ಅಲ್ಲಾಹನ ಕಾರ್ಯವಿಧಾನವನ್ನು ಅವರು ವಿವರಿಸಿದ್ದಾರೆ. ಅದೇ ಸರಣಿಯಲ್ಲಿ, ಪ್ರವಾದಿಯವರ ನೇಮಕದ ಉದ್ದೇಶ ಮತ್ತು ಮಿಥ್ಯ ಧರ್ಮಗಳ ಪತನದ ಕುರಿತು ಅವರು ಈ ರೀತಿ ಬೆಳಕು ಚೆಲ್ಲಿದ್ದಾರೆ. ಸತ್ಯಧರ್ಮಕ್ಕಾಗುವ ಪ್ರತಿಯೊಂದು ವಿಜಯವು 'ಎಲ್ಲ ಧರ್ಮಗಳ ಮೇಲೆ ಪ್ರಾಬಲ್ಯ'ದಲ್ಲಿ ಸೇರಿದೆಯೆಂಬುದೇ ಈ ಸೂಕ್ತದ ಸರಿಯಾದ ವಿಶ್ಲೇಷಣೆಯಾಗಿದೆ. ಕಿಸ್ರಾ-ಕೈಸರ್ (ಪರ್ಶಿಯನ್-ರೋಮನ್) ಸಾಮ್ರಾಜ್ಯಗಳನ್ನು ಬುಡಮೇಲುಗೊಳಿಸುವ ಮೂಲಕ ಉಂಟಾದ ಮಹಾ ವಿಜಯವು ಇದೇ ವಚನದಲ್ಲಿ ಸೇರಿದೆ. ಇದರ ವಾಹಕರು 'ಖಲೀಫರು'ಗಳಾಗಿದ್ದರು. ಆ ಮಹಾನ್ ವ್ಯಕ್ತಿಗಳ ಪ್ರಯತ್ನಗಳೂ ಪ್ರವಾದಿಯವರ ನೇಮಕದ ಪರಿಪೂರ್ಣತೆಯಾಗಿದ್ದುದೂ ಅದರಲ್ಲೇ ಸೇರಿತ್ತು.

ಸತ್ಯಧರ್ಮವು ವಿಜಯ ಹೊಂದುವುದರ ಕುರಿತು ಕೆಲವರು ನಿರಾಶರಾಗಿದ್ದಾರೆ. ಅದಕ್ಕಾಗಿ ಪ್ರಯತ್ನಿಸುವುದು ವ್ಯರ್ಥವೆಂದು ಅದರಿಂದ ನುಣುಚಿಕೊಳ್ಳ ಬಯಸುತ್ತಾರೆ. ಅವರ ಪ್ರಕಾರ, ಈ ಸೂಕ್ತದಲ್ಲಿ ಪ್ರಸ್ತಾಪಿಸಲಾದ ವಿಷಯಗಳೆಲ್ಲ ಪ್ರವಾದಿ(ಸ)ಯವರಲ್ಲಿ ಕೊನೆಗೊಂಡಿದೆ. ಈಗ ನಾವು ಅದಕ್ಕೆ ಬಾಧ್ಯಸ್ಥರಲ್ಲವೆಂದು ಹೇಳುತ್ತಾರೆ. ಈ ಮನೋಸ್ಥಿತಿಯ ಜನರಿಗೆ ಶಾಹ್ ವಲಿಯುಲ್ಲಾಹ್‌ರವರು ಸರಿಯಾದ ಉತ್ತರವನ್ನೇ ನೀಡುತ್ತಾರೆ. ಅವರು ಹೀಗೆ ಬರೆಯುತ್ತಾರೆ-

ಅಲ್ಲಾಹನು ಸನ್ಮಾರ್ಗ ಮತ್ತು ಸತ್ಯಧರ್ಮವನ್ನು ಪ್ರವಾದಿಯವರಿಗೆ ಅವತೀರ್ಣ ಗೊಳಿಸಿದನು. ಅವರು ಅದನ್ನು ಸಹಾಬಿಗಳಿಗೆ ತಲಪಿಸಿದರು. ಅವರು ಪ್ರವಾದಿಯವರ ಉದ್ದೇಶ ಮತ್ತು ಇಂಗಿತವನ್ನು ಚೆನ್ನಾಗಿ ಮನವರಿಕೆ ಮಾಡಿಕೊಂಡರು. ತರುವಾಯ ಅದನ್ನು ತಾಬಈಗಳಿಗೆ ತಲಪಿಸಿದರು. ಅದೇ ರೀತಿ ಕಾಲ ಸರಿದಂತೆ ಈ ಉದ್ದೇಶ ವರ್ಗಾವಣೆಗೊಳ್ಳುತ್ತಾ ಬಂದಿದೆ. ಏಕೆಂದರೆ ಅಲ್ಲಾಹನ ಇಂಗಿತವು ಪ್ರವಾದಿಯವರಿಗೆ(ಸ) ಮಾತ್ರ ಶಿಕ್ಷಣ ನೀಡುವುದಾಗಿರಲಿಲ್ಲ,

ಕೇಳುಗರು ಧರ್ಮ ಪ್ರಚಾರದ ಉದ್ದೇಶವನ್ನು ಗ್ರಹಿಸಿದರೂ ಇಲ್ಲದಿದ್ದರೂ ಪ್ರವಾದಿಯವರು ತಮ್ಮ ಪ್ರಚಾರ ಕಾರ್ಯವನ್ನು ನಿಲ್ಲಿಸಬೇಕೆಂದೂ ಆಗಿರಲಿಲ್ಲ. ವಾಸ್ತವದಲ್ಲಿ ಸತ್ಯ ಧರ್ಮ ಪ್ರಚಾರ ಮತ್ತು ವಿಜಯವೇ ಒಂದು ಕಾಲದ ನಂತರ ಇನ್ನೊಂದು ಕಾಲದಲ್ಲಿ ನಿರಂತರ ನಡೆಯಬೇಕೆಂಬುದೇ ಆಗಿತ್ತು.

ಅವರು 'ಹುಜ್ಜತುಲ್ಲಾಹಿಲ್ ಬಾಲಿಗ' ಎಂಬ ತನ್ನ ಪ್ರಸಿದ್ಧ ಗ್ರಂಥದಲ್ಲಿ ವಿವಿಧ ಅಧ್ಯಾಯಗಳಲ್ಲಿ ವಿವಿಧ ರೀತಿಯಲ್ಲಿ ಅಲ್ಲಾಹನು ಪ್ರವಾದಿಗಳನ್ನು 'ಇಕಾಮತುದ್ದೀನ್'ನ ಉದ್ದೇಶಕ್ಕಾಗಿಯೇ ಕಳಿಸುತ್ತಾ ಇದ್ದನೆಂದೂ, ಪ್ರವಾದಿ ಮುಹಮ್ಮದ್(ಸ)ರನ್ನು ಇತರ ಧರ್ಮಗಳ ಮೇಲೆ ಸತ್ಯ ಧರ್ಮವನ್ನು ಪ್ರಬಲಗೊಳಿಸಲಿಕ್ಕಾಗಿ ಕಳುಹಿಸಿರುವನೆಂದೂ ಪದೇ ಪದೇ ಆವರ್ತಿಸಿ ಹೇಳಿದ್ದಾರೆ. 'ಅಬ್ವಾಬುಲ್ ಈಮಾನ್'ನ ಮುನ್ನುಡಿಯಲ್ಲಿ ಅವರು ಹೀಗೆ ಬರೆದಿದ್ದಾರೆ. ಪ್ರವಾದಿ(ಸ)ರನ್ನು ಎಲ್ಲ ಧರ್ಮಗಳ ಎಲ್ಲ ಜನರ ಕಡೆಗೆ ಕಳುಹಿಸಲಾಗಿದೆ. ಅಂದರೆ ಮರ್ಯಾದಸ್ಥರನ್ನು ಗೌರವದೊಂದಿಗೆ ಮತ್ತು ನಿಂದ್ಯರನ್ನು ಅವಮಾನದೊಂದಿಗೆ ಕಾಣಲಿಕ್ಕಾಗಿತ್ತು. ಆದ್ದರಿಂದ ಅವರ ಧರ್ಮದಲ್ಲಿ ಎಲ್ಲ ರೀತಿಯ ಜನರು ಪ್ರವೇಶಿಸಿದರು. ಆದ್ದರಿಂದ ಮುಸ್ಲಿಮರು ಮತ್ತು ಮುಸ್ಲಿಮೇತರರ ಮಧ್ಯೆ ತಾರತಮ್ಯ ಅಗತ್ಯವಾಯಿತು.

ಒಂದೆಡೆ ಅವರು ಜಿಹಾದ್‌ನ ಮಹತ್ವದ ಕುರಿತು ಹೀಗೆ ಬೆಳಕು ಚೆಲ್ಲುತ್ತಾರೆ– ಪ್ರವಾದಿಯವರನ್ನು(ಸ) ಸಾರ್ವತ್ರಿಕ ಖಿಲಾಫತ್‌ನೊಂದಿಗೆ ಕಳಿಸಲಾಗಿತ್ತು. ಅವರ ಧರ್ಮ ಇತರೆಲ್ಲ ಧರ್ಮಗಳ ಮೇಲೆ ಪ್ರಾಬಲ್ಯ ಸಾಧಿಸುವುದು ಜಿಹಾದ್ ಮತ್ತು ಅದರ ಸಂಪನ್ಮೂಲಗಳ ಸಿದ್ಧತೆಯ ಹೊರತು ಸಾಧ್ಯವಿರಲಿಲ್ಲ. ಅವರು ಜಿಹಾದನ್ನು ಕೈ ಬಿಟ್ಟಾಗ ಮತ್ತು ಎತ್ತಿನ ಬಾಲ ಹಿಡಿಯುವುದರಲ್ಲಿ ನಿರತರಾದಾಗ (ಅಂದರೆ ಕೇವಲ ಸಂಪಾದನೆ ಮಾಡುವುದರಲ್ಲಿ ಮುಳುಗಿ ಬಿಟ್ಟಾಗ ಮತ್ತು ಜಿಹಾದ್‌ನ ಕುರಿತು ನಿರ್ಲಕ್ಷ್ಯ ತೋರಿದಾಗ) ಅವರನ್ನು ಅವನತಿ ಬಾಧಿಸಿತು ಮತ್ತು ಇತರ ಧರ್ಮೀಯರು ಅವರ ಮೇಲೆ ಪ್ರಾಬಲ್ಯ ಸಾಧಿಸಿದರು.

ಬರೆಹ ದೀರ್ಘವಾದೀತೆಂಬ ಭಯದಿಂದ ನಾನು ಇತರ ವಿದ್ವಾಂಸರ ಹೇಳಿಕೆಗಳನ್ನು ಉಲ್ಲೇಖಿಸಿಲ್ಲ. ಮೇಲಿನ ಉದ್ಧರಣೆಗಳಿಂದ, ಶಾಹ್ ವಲಿಯುಲ್ಲಾಹ್‌ರವರು, ಪ್ರವಾದಿ ಯವರನ್ನು(ಸ) ನೇಮಕ ಮಾಡುವ ಉದ್ದೇಶವು ಸತ್ಯದ ಧರ್ಮವನ್ನು ಇತರ ಎಲ್ಲ ಧರ್ಮಗಳ ಮೇಲೆ ಪ್ರಾಬಲ್ಯ ಸಾಧಿಸುವುದಾಗಿತ್ತೆಂದು ದೃಢವಾಗಿ ಹೇಳಿದ್ದಾರೆಂದು ವ್ಯಕ್ತವಾಗುತ್ತದೆ. ನಮ್ಮ ಮೇಲೆ 'ಇಕಾಮತುದ್ದೀನ್' ಕಡ್ಡಾಯವೆಂಬುದರ ಪ್ರಬಲ ಆಧಾರವು, ನಾವು ಯಾವ ಪ್ರವಾದಿಯ ಸಮುದಾಯವಾಗಿದ್ದೇವೆಯೋ ಆ ಪ್ರವಾದಿಯ ನೇಮಕದ ಉದ್ದೇಶವೂ 'ಇಕಾಮತುದ್ದೀನ್' ಆಗಿತ್ತು ಎಂಬುದಾಗಿದೆ.

## ಆಧಾರ : 3

## ಕುರ್‌ಆನ್ ಮತ್ತು ಅದಕ್ಕಿಂತ ಮುಂಚಿನ ಗ್ರಂಥಗಳನ್ನು ಅವತೀರ್ಣಗೊಳಿಸುವ ಉದ್ದೇಶ:

ಅಲ್ಲಾಹನು ತನ್ನ ಪ್ರವಾದಿಗಳನ್ನು ಯಾವ ಮಾರ್ಗದರ್ಶನ ಮತ್ತು ಸತ್ಯಧರ್ಮದೊಂದಿಗೆ ಕಳುಹಿಸುತ್ತಾನೋ ಅದರ ಮೂಲ ಸ್ರೋತವು ಅವರಿಗೆ ಅವತೀರ್ಣಗೊಳ್ಳುತ್ತಿದ್ದ ಗ್ರಂಥಗಳಾಗಿದ್ದುವು. ಸತ್ಯ ಧರ್ಮವನ್ನು ಮಿಥ್ಯ ಧರ್ಮಗಳ ಮೇಲೆ ಪ್ರಬಲಗೊಳಿಸಿ ಸಂಸ್ಥಾಪಿಸುವುದೆಂದರೆ ಆ ಸತ್ಯ ಗ್ರಂಥವನ್ನು ಸಂಸ್ಥಾಪಿಸಿ ಅದರ ಆದೇಶಗಳನ್ನು ಜಾರಿಗೊಳಿಸುವುದಾಗಿದೆ. ಆ ಗ್ರಂಥಗಳ ಅವತೀರ್ಣದ ಉದ್ದೇಶವು ಮಾನವನು ಅನ್ಯಾಯ-ಅತಿರೇಕಗಳು ಮತ್ತು ಚಿತ್ತಾಕಾಂಕ್ಷೆಗಳಿಗೆ ಬಲಿ ಬಿದ್ದು ಧರ್ಮದಲ್ಲಿ ಉಂಟು ಮಾಡಿರುವ ಅಭಿಪ್ರಾಯ ಭಿನ್ನತೆಗಳನ್ನು ಹೋಗಲಾಡಿಸುವುದಾಗಿದೆ. ಅವನು ಬಹುದೇವತ್ವ, ಸತ್ಯನಿಷೇಧ ಮತ್ತು ಪಾಪಗಳ ಆಧಾರದಲ್ಲಿ ಸ್ಥಾಪಿಸಿರುವ ವ್ಯವಸ್ಥೆಯನ್ನು ಅಳಿಸಿ ತೌಹೀದ್, ಈಮಾನ್ ಮತ್ತು ಇಸ್ಲಾಮಿನ (ಏಕದೇವತ್ವ, ಸತ್ಯವಿಶ್ವಾಸ ಮತ್ತು ದೇವಾನುಸರಣೆಯ) ವ್ಯವಸ್ಥೆಯನ್ನು ಸ್ಥಾಪಿಸುವುದಾಗಿದೆ ಮತ್ತು ಅವನನ್ನು ಅಂಧಕಾರದ ಕೂಪದಿಂದ ಹೊರತೆಗೆದು ನೇರ ಹಾಗೂ ಸ್ಪಷ್ಟ ಸನ್ಮಾರ್ಗಕ್ಕೆ ತರುವುದಾಗಿದೆ. ಆ ಗ್ರಂಥಗಳಿಗೆ ಜಗದೊಡೆಯನ ಕಾನೂನು ಸಂಹಿತೆಯ ಸ್ಥಾನವಿತ್ತು. ಅವುಗಳ ಮೇಲೆ ವಿಶ್ವಾಸವಿರಿಸುವುದು ಮತ್ತು ಅವುಗಳ ಆದೇಶಗಳಂತೆ ನಡೆಯುವುದು ಪ್ರವಾದಿಗಳಿಗೆ ಕಡ್ಡಾಯವಾಗಿತ್ತು. ಅವರ ಅಭಿಸಂಬೋಧಿತರಿಗೂ ಅದು ಕಡ್ಡಾಯವಾಗಿತ್ತು. ಈ ರೀತಿ ಪ್ರವಾದಿಗಳು ಬರುತ್ತಲೂ ಗ್ರಂಥಗಳು ಇಳಿಯುತ್ತಲೂ ಇದ್ದುವು. ಕಟ್ಟ ಕಡೆಗೆ ಅಲ್ಲಾಹನ ಕೊನೆಯ ಪ್ರವಾದಿ ಹಾಗೂ ಅಂತಿಮ ಸಂದೇಶವಾಹಕ(ಸ)ರ ಆಗಮನ ಮತ್ತು ಅಂತಿಮ ಗ್ರಂಥ ಅವತೀರ್ಣವಾಗುವ ಸಮಯ ಬಂದು ಬಿಟ್ಟಿತು. ಆ ಪ್ರವಾದಿಯೇ ಮುಹಮ್ಮದ್(ಸ) ಆಗಿದ್ದಾರೆ ಮತ್ತು ಆ ಗ್ರಂಥವೇ ಪವಿತ್ರ ಕುರ್‌ಆನ್ ಆಗಿದೆ. ಇನ್ನು ಅಂತ್ಯದಿನ(ಕಿಯಾಮತ್)ದ ವರೆಗೆ ಆ ಗ್ರಂಥ ಮಾತ್ರ ಸತ್ಯ-ಅಸತ್ಯವನ್ನು ಪ್ರತ್ಯೇಕಿಸಿ ತೋರಿಸುವ ಒರೆಗಲ್ಲಾಗಿದೆ. ಅದರ ಕಾನೂನುಗಳನ್ನು ಸಂಪೂರ್ಣ ಮಾನವಕುಲವು ಕಡ್ಡಾಯವಾಗಿ ಪಾಲಿಸಬೇಕಾಗಿದೆ. ತೌರಾತ್ ಅವತೀರ್ಣಗೊಂಡಾಗ, ಅದನ್ನು ಸ್ಥಾಪಿಸುವುದು 'ಇಕಾಮತುದ್ದೀನ್' (ಧರ್ಮ ಸಂಸ್ಥಾಪನೆ) ಆಗಿತ್ತು. ಇಂಜೀಲ್ ಅವತೀರ್ಣಗೊಂಡಾಗಲೂ ಅದನ್ನು ಸ್ಥಾಪಿಸುವುದು 'ಇಕಾಮತುದ್ದೀನ್' ಆಗಿತ್ತು. ಈಗಿನ್ನು ಪವಿತ್ರ ಕುರ್‌ಆನ್ ಅವತೀರ್ಣಗೊಂಡಿದ್ದು ಇದನ್ನು ಸ್ಥಾಪಿಸುವುದೂ 'ಇಕಾಮತುದ್ದೀನ್' ಮಾತ್ರ ಆಗಿದೆ. ಇದು ಅಂತ್ಯದಿನದ ವರೆಗೂ ಮಾಡಬೇಕಾದ ಕಾರ್ಯವಾಗಿದೆ. ಗ್ರಂಥದವರ ಕುರಿತು ಸ್ವಯಂ ಕುರ್‌ಆನ್ ಹೀಗೆ ಹೇಳುತ್ತದೆ- **''ಅವರು ತೌರಾತ್, ಇಂಜೀಲ್ ಮತ್ತು ಅವರ ಪ್ರಭುವಿನ ವತಿಯಿಂದ ಅವರ ಕಡೆಗೆ ಕಳಿಸಲ್ಪಟ್ಟಿದ್ದ ಇತರ ಗ್ರಂಥಗಳನ್ನು ಸ್ಥಾಪಿಸುತ್ತಿದ್ದರೆ ಅವರಿಗಾಗಿ ಆಹಾರವು ಮೇಲ್ಭಾಗದಿಂದ ಸುರಿಯುತ್ತಿತ್ತು ಮತ್ತು ಕೆಳಭಾಗದಿಂದ ಉಕ್ಕಿ ಬರುತ್ತಿತ್ತು.''** (ಸೂರಃ ಅಲ್‌ಮಾಇದ: 66)

ಈ ಸೂಕ್ತದಲ್ಲಿ ತೌರಾತ್ ಮತ್ತು ಇಂಜೀಲ್‌ನ ಸ್ಥಾಪನೆ(ಇಕಾಮತ್)ಯ ಅರ್ಥ–ಗ್ರಂಥದವರು ಪ್ರಾಮಾಣಿಕವಾಗಿ ಈ ಧರ್ಮದ ಅನುಸರಣೆಯಲ್ಲಿ ಸ್ಥಿರವಾಗಿರುತ್ತಿದ್ದರೆ ಮತ್ತು ಅದನ್ನು ತಮ್ಮ ಜೀವನದ ಸಂಹಿತೆಯಾಗಿ ಮಾಡುತ್ತಿದ್ದರೆ, ಈ ಲೋಕದಲ್ಲೇ ಅವರಿಗೆ ಎಲ್ಲೆಡೆಯಿಂದಲೂ ಆಹಾರ ವರ್ಷಿಸುತ್ತಿತ್ತು. ಭೂಮಿಯಿಂದ ಉಕ್ಕಿ ಬರುತ್ತಿತ್ತು. ಅನಂತರ ಇದೇ ಅಧ್ಯಾಯದಲ್ಲಿ ಗ್ರಂಥದವರನ್ನುದ್ದೇಶಿಸಿ ಹೇಳಿದ ಮಾತಿನ ಬಗ್ಗೆ ಗಮನಹರಿಸಿದರೆ ಅದು ಅವರಿಗೆ ಮಾತ್ರವಲ್ಲ, ನಮಗೂ ಎಷ್ಟು ಪ್ರಧಾನವಾಗಿದೆಯೆಂದು ಅರ್ಥವಾಗಬಹುದು.

ಪ್ರವಾದಿಯವರೇ ಹೇಳಿರಿ– **''ಓ ಗ್ರಂಥದವರೇ, ನೀವು ತೌರಾತನ್ನೂ ಇಂಜೀಲನ್ನೂ ನಿಮಗೆ ನಿಮ್ಮ ಪ್ರಭುವಿನ ವತಿಯಿಂದ ಅವತೀರ್ಣಗೊಂಡ ಇತರ ಗ್ರಂಥಗಳನ್ನೂ ನೆಲೆ ನಿಲ್ಲಿಸುವ ತನಕ ನಿಮಗೆ ಯಾವ ತಳಹದಿಯೂ ಇಲ್ಲ.''** (ಸೂರಃ ಅಲ್‌ಮಾಇದ: 68)

ಹೆಚ್ಚಿನ ವ್ಯಾಖ್ಯಾನಕಾರರ ಪ್ರಕಾರ, 'ನಿಮ್ಮ ಪ್ರಭುವಿನ ಕಡೆಯಿಂದ ಅವತೀರ್ಣ ಗೊಂಡಿದೆ ಎಂದು ಹೇಳಿರುವುದು ಕುರ್‌ಆನಿನ ಕುರಿತಾಗಿದೆ. ಅಂದರೆ ನೀವು ತೌರಾತ್, ಇಂಜೀಲ್ ಮತ್ತು ಕುರ್‌ಆನನ್ನು ನೆಲೆ ನಿಲ್ಲಿಸುವ ತನಕ ನಿಮಗೆ ಯಾವುದೇ ಬೆಲೆಯಿಲ್ಲ, ನಿಮ್ಮ ನೆಲೆ ಶೂನ್ಯವಾಗಿದೆಯೆಂದರ್ಥ. ಈ ಗ್ರಂಥಗಳ ಎಲ್ಲ ಆಜ್ಞೆಗಳನ್ನು ಪ್ರಾಮಾಣಿಕವಾಗಿ ಪಾಲಿಸುವುದು ಕಡ್ಡಾಯ. ಅನ್ಯಥಾ ನಿಮ್ಮ ಧಾರ್ಮಿಕ ಜೀವನಕ್ಕೆ ಯಾವುದೇ ಬೆಲೆಯಿರುವುದಿಲ್ಲ, ಅಲ್ಲಾಹನ ಗ್ರಂಥಗಳ ಸಂಸ್ಥಾಪನೆಯು ಅವರ ಮೇಲೆ ಕಡ್ಡಾಯವಾಗಿಲ್ಲದಿರುತ್ತಿದ್ದರೆ 'ನೀವು ಧಾರ್ಮಿಕವಾಗಿ ಏನೂ ಆಗಿರುವುದಿಲ್ಲ'ವೆಂದು ಹೇಳುವುದು ಯಾವ ರೀತಿಯಿಂದಲೂ ಸರಿಯೆನಿಸುತ್ತಿರಲಿಲ್ಲ, ಇತರ ಆಧಾರಗಳಂತೆಯೇ ಈ ಸೂಕ್ತ ಕೂಡಾ, ಗ್ರಂಥದ ಮೇಲೆ ವಿಶ್ವಾಸವಿದೆಯೆಂದು ವಾದಿಸುವವರ ಮೇಲೆ ಈ ಗ್ರಂಥದ ಸ್ಥಾಪನೆಯೂ ಕಡ್ಡಾಯವಾಗಿದೆಯೆಂಬುದಕ್ಕೆ ಸ್ಪಷ್ಟ ಆಧಾರವಾಗಿದೆ. ಮೇಲೆ ಹೇಳಿರುವಂತೆ ಇನ್ನು ಅಂತ್ಯದಿನದ ವರೆಗೆ ಕುರ್‌ಆನನ್ನು ನೆಲೆ ನಿಲ್ಲಿಸುವುದರ ಹೆಸರೇ 'ಇಕಾಮತುದ್ದೀನ್' ಆಗಿದೆ.

ಇನ್ನೂ ಕೆಲವು ಆಧಾರಗಳು: ಅಲ್‌ಮಾಇದಃ ಅಧ್ಯಾಯದ ಈ ಎರಡು ಸೂಕ್ತಗಳಲ್ಲಿ ಗ್ರಂಥದವರನ್ನು ಅಭಿಸಂಬೋಧಿಸಲಾಗಿತ್ತು. ಇದಲ್ಲದೆ ಎಲ್ಲ ದೈವಿಕ ಗ್ರಂಥಗಳ ಅವತೀರ್ಣದ ಉದ್ದೇಶವನ್ನು ಅರುಹುವ ಇನ್ನೂ ಅನೇಕ ಸೂಕ್ತಗಳಿವೆ. ಇಲ್ಲಿ ಕೇವಲ ಎರಡು ಸೂಕ್ತಗಳನ್ನು ಕೊಡುತ್ತಿದ್ದೇನೆ.

''ಆರಂಭದಲ್ಲಿ ಜನರೆಲ್ಲರೂ ಒಂದೇ ಸಂಪ್ರದಾಯದವರಾಗಿದ್ದರು. (ಈ ಸ್ಥಿತಿ ಬಹುಕಾಲ ಉಳಿಯಲಿಲ್ಲ, ಅವರೊಳಗೆ ಭಿನ್ನಾಭಿಪ್ರಾಯಗಳುಂಟಾದುವು) ಆಗ ಅಲ್ಲಾಹನು ಸತ್ಯಮಾರ್ಗದ ಬಗ್ಗೆ ಸುವಾರ್ತೆ ನೀಡುವವರೂ ಮಿಥ್ಯಮಾರ್ಗದ ಬಗ್ಗೆ ಎಚ್ಚರಿಕೆ ಕೊಡುವವರೂ ಆದ ಪ್ರವಾದಿಗಳನ್ನು ರವಾನಿಸಿದನು ಮತ್ತು ಅವರೊಂದಿಗೆ, ಸತ್ಯದ ವಿಷಯದಲ್ಲಿ ಜನರಲ್ಲುಂಟಾಗಿದ್ದ ಭಿನ್ನಾಭಿಪ್ರಾಯಗಳ ಬಗ್ಗೆ ತೀರ್ಪು ನೀಡಲಿಕ್ಕಾಗಿ ಪರಮಸತ್ಯ ಗ್ರಂಥವನ್ನು ಇಳಿಸಿದನು. (ಪ್ರಾರಂಭದಲ್ಲಿ ಜನರಿಗೆ ಸತ್ಯವನ್ನು ತೋರಿಸಿ ಕೊಡದಿರುವುದರಿಂದ ಏನೂ ಅವರಲ್ಲಿ ಈ

ತರದ ಭಿನ್ನಾಭಿಪ್ರಾಯಗಳು ತಲೆದೋರಿರುವುದಲ್ಲ, ನಿಜವಾಗಿ) ಯಾರಿಗೆ ಸತ್ಯದ ಶಿಕ್ಷಣ ಕೊಡಲಾಗಿತ್ತೋ ಅವರೇ ಈ ಅಭಿಪ್ರಾಯ ಭೇದಗಳನ್ನುಂಟು ಮಾಡಿದರು. ಅವರು ಕೇವಲ ಪರಸ್ಪರ ಅತಿರೇಕ ನಡೆಸಲು ಇಷ್ಟಪಡುತ್ತಿದ್ದುದರಿಂದಲೇ ಸುವ್ಯಕ್ತ ದೃಷ್ಟಾಂತಗಳನ್ನು ಪಡೆದ ಬಳಿಕ ಸತ್ಯವನ್ನು ತ್ಯಜಿಸಿ ವಿವಿಧ ಹಾದಿಗಳನ್ನು ಸೃಷ್ಟಿಸಿಕೊಂಡರು. ಜನರು ಭಿನ್ನಾಭಿಪ್ರಾಯ ತಾಳಿದ್ದ ಆ ಸತ್ಯಮಾರ್ಗವನ್ನು ಅಲ್ಲಾಹನು ತನ್ನ ಅನುಮತಿಯಿಂದ, ಪ್ರವಾದಿಗಳ ಮೇಲೆ ವಿಶ್ವಾಸವಿಟ್ಟವರಿಗೆ ತೋರಿಸಿಕೊಟ್ಟನು. ಅಲ್ಲಾಹನು ತಾನಿಚ್ಛಿಸಿದವರಿಗೆ ಸನ್ಮಾರ್ಗವನ್ನು ತೋರಿಸುತ್ತಾನೆ. ನಿಮಗಿಂತ ಹಿಂದೆ ವಿಶ್ವಾಸವಿಟ್ಟಿದ್ದವರ ಮೇಲೆ ಸಂಭವಿಸಿದ್ದ ಘಟನೆಗಳೆಲ್ಲ ನಿಮ್ಮ ಮೇಲೆ ಇನ್ನೂ ಸಂಭವಿಸದಿದ್ದರೂ ನಿರಾಯಾಸವಾಗಿ ಸ್ವರ್ಗ ಪ್ರವೇಶ ಮಾಡುವಿರೆಂದು ನೀವು ಎಣಿಸಿದ್ದೀರಾ? ಆಗಿನ ಸಂದೇಶ ವಾಹಕರೂ ಅವರ ಜೊತೆಗಿದ್ದ ಸತ್ಯವಿಶ್ವಾಸಿಗಳೂ, 'ಅಲ್ಲಾಹನ ಸಹಾಯ ಯಾವಾಗ ಬಂದೀತು?' ಎಂದು ಕಿರುಚಿ ಬಿಡುವಷ್ಟು ಕಷ್ಟಗಳೂ ವಿಪತ್ತುಗಳೂ ಅವರ ಮೇಲೆ ಎರಗಿದುವು ಮತ್ತು ಅವರನ್ನು ನಡುಗಿಸಿ ಬಿಡಲಾಯಿತು. 'ಇದೋ, ಅಲ್ಲಾಹನ ಸಹಾಯ ಸಮೀಪವಿದೆ' (ಎಂದು ಆಗ ಅವರನ್ನು ಸಂತೈಸಲಾಯಿತು.)'' (ಸೂರಃ ಅಲ್‌ಬಕರ: 213-214)

ಈ ಎರಡು ಸೂಕ್ತಗಳಿಂದ ನಾಲ್ಕು ವಿಷಯಗಳು ಸ್ಪಷ್ಟವಾಗಿ ತಿಳಿದು ಬರುತ್ತದೆ.

1. ಈ ಲೋಕದಲ್ಲಿ ಮಾನವನು ಪೂರ್ಣ ಬೆಳಕಿನಲ್ಲಿ ಜೀವನ ಯಾತ್ರೆ ಆರಂಭಿಸಿದನು. ಸತ್ಯದ ಜ್ಞಾನ ಲಭಿಸಿದ ಕಾರಣ ಮಾನವರೆಲ್ಲ ಒಂದು ದೀರ್ಘ ಕಾಲದ ವರೆಗೆ ಒಂದೇ ಸಮುದಾಯವಾಗಿ ಬಾಳಿದರು. ಅನಂತರ ಕೆಲವು ಸ್ವಾರ್ಥಿಗಳ ದುರ್ಬುದ್ಧಿಯಿಂದಾಗಿ ಒಬ್ಬರು ಇನ್ನೊಬ್ಬರ ಮೇಲೆ ಅತಿರೇಕವೆಸಗ ತೊಡಗಿದರು. ತಮ್ಮ ಸ್ವಾರ್ಥ ಲಾಭಗಳಿಗಾಗಿ ಜಗಳಾಡ ತೊಡಗಿದ್ದರು. ಇದರಿಂದ ಸಮುದಾಯದ ಏಕತೆ ಛಿದ್ರಗೊಂಡಿತು. ಸತ್ಯ ಧರ್ಮದಲ್ಲಿ ಭಿನ್ನತೆಗಳುಂಟಾದುವು. ಆದರೆ ಅಲ್ಲಾಹನು ಪರಮ ದಯಾಮಯನೂ ಕರುಣಾನಿಧಿಯೂ ಆಗಿದ್ದಾನೆ. ಆದ್ದರಿಂದ ಅವನು ಮಾನವರನ್ನು ವಿನಾಶದ ಕೂಪಕ್ಕೆ ಬೀಳಲು ಬಿಡಲಿಲ್ಲ. ಅವರ ಸುಧಾರಣೆ ಮತ್ತು ಯಶಸ್ಸಿಗಾಗಿ ಸಜ್ಜನ ದಾಸರನ್ನು ನೇಮಿಸಿದನು.

2. ಎಲ್ಲ ಪ್ರವಾದಿಗಳ ಮತ್ತು ಸಂದೇಶವಾಹಕರ ಜೊತೆಯಲ್ಲಿ ಅಲ್ಲಾಹನು ಅವತೀರ್ಣಗೊಳಿಸಿದ ಗ್ರಂಥಗಳೂ ಇದ್ದುವು. ಅವು ಆಚಾರ-ವಿಚಾರಗಳ ಎಲ್ಲ ಭಿನ್ನಾಭಿಪ್ರಾಯಗಳು ಮತ್ತು ವಿವಾದಗಳ ತೀರ್ಪುಗಾರನಂತಿದ್ದುವು. ಪ್ರವಾದಿಗಳನ್ನು ಕೇವಲ ಸುವಾರ್ತೆ ಕೊಡುವವರಾಗಿ ಮತ್ತು ಎಚ್ಚರಿಕೆ ನೀಡುವವರಾಗಿ ಕಳುಹಿಸಲಾಗಿಲ್ಲ, ಅವರಿಗೆ ಗ್ರಂಥಕೊಟ್ಟು ಜನರ ಎಲ್ಲ ಭಿನ್ನಾಭಿಪ್ರಾಯಗಳನ್ನು ಅಳಿಸಿ ಹಾಕಿ ಅವರನ್ನು ಧರ್ಮದಲ್ಲಿ ಒಂದುಗೂಡಿಸಲಿಕ್ಕಾಗಿ ಕಳುಹಿಸಲಾಗುತ್ತಿತ್ತು. ಆ ಭಿನ್ನಾಭಿಪ್ರಾಯಗಳಿಂದಾಗಿಯೇ ಒಂದೇ ಸಮುದಾಯವು ವಿಭಿನ್ನ ಜಾತಿ ಧರ್ಮಗಳಲ್ಲಿ ಹರಿಹಂಚಿ ಹೋಗಿತ್ತು. ಬದುಕಿನ ಯಾವುದೇ ಸಮಸ್ಯೆಯ ಕುರಿತು ಅದು ಸರಿಯೋ ತಪ್ಪೋ ಅಥವಾ ಸತ್ಯವೋ ಅಸತ್ಯವೋ ಎಂದು ತೀರ್ಮಾನಿಸುವ ಅಧಿಕಾರ ಈ ಗ್ರಂಥಕ್ಕೆ ಮಾತ್ರ ಇತ್ತು.

3. ಪ್ರವಾದಿ ಮುಹಮ್ಮದ್(ಸ)ರ ಮೇಲೆ ವಿಶ್ವಾಸವಿರಿಸಿದವರನ್ನುದ್ದೇಶಿಸಿ, ಹಿಂದಿನ ಜನಾಂಗಗಳು ತಮ್ಮ ಕಾಲದ ಪ್ರವಾದಿಗಳನ್ನೂ ಗ್ರಂಥಗಳ್ನೂ ತಮ್ಮ ತೀರ್ಪುಗಾರರೆಂದು ಸುಲಭದಲ್ಲಿ ಒಪ್ಪಲಿಲ್ಲವೆಂದು ಹೇಳಲಾಯಿತು. ಆ ಮಾರ್ಗವು ಹೂವಿನ ಹಾಸಿಗೆಯಲ್ಲ, ಅದು ಯಾವಾಗಲೂ ಮುಳ್ಳಿನ ಕಂತೆಯೇ ಆಗಿತ್ತು. ನಿಮಗಿಂತ ಮುಂಚಿನ ಸತ್ಯದ ವಾಹಕರು ಸತ್ಯದ ಮಾರ್ಗದಲ್ಲಿ ಎಲ್ಲ ರೀತಿಯ ಸಂಕಷ್ಟಗಳನ್ನು ಸಹಿಸಿದ್ದಾರೆ. ಸತ್ಯದ ವೈರಿಗಳ ಕೈಗಳಿಂದ ತೀವ್ರ ಹಿಂಸೆ-ದೌರ್ಜನ್ಯಗಳನ್ನೆದುರಿಸಿದ್ದಾರೆ. ಅದನ್ನು ಸಹಿಸಲಾಗದೆ ಆಯಾ ಕಾಲದ ಸತ್ಯವಿಶ್ವಾಸಿಗಳ ಜೊತೆಗೆ ಪ್ರವಾದಿಗಳು ಕೂಡಾ ಚೀರಾಡಿದ್ದರು. ಹಾಗಿರುವಾಗ ಅವರಿಗೆ ಬಂದಿದ್ದಂತಹ ಸಂಕಷ್ಟಗಳು ನಿಮಗೂ ಬರಲಾರದೆಂದು ನೀವು ಹೇಗೆ ಭಾವಿಸುತ್ತೀರಿ ಎಂದು ಹೇಳಲಾಗುತ್ತದೆ.

4. ಅಲ್ಲಾಹನ ವಿರೋಧಿಗಳ ವಿರುದ್ಧ ಹೋರಾಟ ಹಾಗೂ ಸತ್ಯ ಗ್ರಂಥದ ಸಂಸ್ಥಾಪನೆಗೆ ಇರುವ ಎಲ್ಲ ಪ್ರಯತ್ನಗಳ ಉದ್ದೇಶವು ವಿಶ್ವಾಸಿಗಳನ್ನು ಸ್ವರ್ಗಕ್ಕೆ ಅರ್ಹಗೊಳಿಸುವುದಾಗಿದೆ. ''ನೀವು ಸ್ವರ್ಗಕ್ಕೆ ಪ್ರವೇಶಿಸಬಹುದೆಂದು ಭಾವಿಸಿದ್ದಿರಾ?'' ಎಂಬ ಮಾತಿನಿಂದ, ಧರ್ಮ ಸಂಸ್ಥಾಪನೆಗಾಗಿ ಜೀವಾರ್ಪಣೆ ಮಾಡಲು ಪ್ರೇರಣೆ ಹಾಗೂ ನೈಜ ಗುರಿಯು ಅಲ್ಲಾಹನ ಸಂಪ್ರೀತಿ ಮತ್ತು ಸ್ವರ್ಗದ ಗಳಿಕೆಯಾಗಿದೆಯೆಂದು ತಿಳಿದು ಬರುತ್ತದೆ. ಸ್ವರ್ಗವು ಧರ್ಮ ಸಂಸ್ಥಾಪನೆಯೊಂದಿಗೆ ಜೋಡಿಸಲ್ಪಟ್ಟಿದೆಯೆಂದು ಇದರಿಂದ ವ್ಯಕ್ತವಾಗುತ್ತದೆ. ದೇವನು ಅವತೀರ್ಣಗೊಳಿಸಿದ ಕಾನೂನಿನ ಆಧಾರದಲ್ಲಿ ಜನರನ್ನು ಒಗ್ಗೂಡಿಸುವ ಪ್ರಯತ್ನದಿಂದ ನುಣುಚಿಕೊಂಡರೂ ದೇವಸಂಪ್ರೀತಿ ಸಿಗಬಹುದು ಮತ್ತು ಸ್ವರ್ಗ ಪ್ರಾಪ್ತಿಯಾಗಬಹುದು ಎಂದು ನಿರೀಕ್ಷಿಸುವುದು ತಪ್ಪಾದೀತು.

ಅಲ್ಲಾಹನು ಕಳಿಸಿದ ಎಲ್ಲ ಕಾನೂನುಗಳನ್ನು ಅನುಸರಿಸಲು ಮತ್ತು ಅವುಗಳನ್ನು ಜಾರಿಗೊಳಿಸಲು ರಾಜಕೀಯ ಶಕ್ತಿಯು ಅಗತ್ಯವೆಂಬುದರ ಸ್ಪಷ್ಟ ಸೂಚನೆಯು ಈ ಕೆಳಗಿನ ಸೂಕ್ತದಿಂದ ವ್ಯಕ್ತಪಡಿಸಲಾಗಿದೆ. **''ನಾವು ನಮ್ಮ ಸಂದೇಶವಾಹಕರನ್ನು ಸುವ್ಯಕ್ತ ನಿದರ್ಶನಗಳು ಮತ್ತು ಸನ್ಮಾರ್ಗದರ್ಶನದೊಂದಿಗೆ ಕಳುಹಿಸಿದೆವು. ಜನರು ನ್ಯಾಯದಲ್ಲಿ ಸ್ಥಿರವಾಗಿ ನಿಲ್ಲಲೆಂದು ಅವರ ಜೊತೆ ಗ್ರಂಥ ಮತ್ತು ತಕ್ಕಡಿಯನ್ನು ಅವತೀರ್ಣಗೊಳಿಸಿದೆವು.''**

- (ಸೂರಃ ಅಲ್ ಹದೀದ್: 35)

ಈ ಸೂಕ್ತದಲ್ಲಿ ಗ್ರಂಥ ಮತ್ತು ತಕ್ಕಡಿಯನ್ನು ಇಳಿಸಿರುವ ಉದ್ದೇಶವನ್ನು ಹೇಳಲಾಗಿದೆ. ಮನುಷ್ಯನು ಅಕ್ರಮ-ಅನ್ಯಾಯವನ್ನು ತೊರೆದು ನ್ಯಾಯ-ನೀತಿಯನ್ನು ಕೈಗೊಳ್ಳಬೇಕು. ಆದರೆ ಅಕ್ರಮ-ಅನ್ಯಾಯದ ನಿರ್ಮೂಲನೆ ಮತ್ತು ನ್ಯಾಯ-ನೀತಿಯ ಸ್ಥಾಪನೆಯು ಶಕ್ತಿಯಿಂದಲ್ಲದೆ ಸಾಧ್ಯವಿಲ್ಲ. ಆದ್ದರಿಂದ ಸೂಕ್ತದಲ್ಲಿ ಕಬ್ಬಿಣದ ಸೃಷ್ಟಿಯ ಮೂರು ಉದ್ದೇಶಗಳನ್ನು ವಿವರಿಸಲಾಗಿದೆ. 1) ಅದರಿಂದ ಯುದ್ಧ ಸಾಮಗ್ರಿಗಳನ್ನೂ ಶಸ್ತ್ರಾಸ್ತ್ರಗಳನ್ನೂ ತಯಾರಿಸುವುದು. 2) ಅದರಿಂದ ಇನ್ನೂ ಕೆಲವು ಪ್ರಯೋಜನಗಳು. 3) ಆ ಶಕ್ತಿಯ ಮೂಲಕ ಅಲ್ಲಾಹನ ಧರ್ಮಕ್ಕೆ ಸಹಾಯವೊದಗಿಸುವುದು. ಅದನ್ನು ಸ್ಥಾಪಿಸಲು ಮತ್ತು ಉಳಿಸಲು ಶಕ್ತಿ ಮತ್ತು ಅಧಿಕಾರ ಅಗತ್ಯವಾಗಿದೆ.

ಅಲ್ಲಾಮಾ ಆಲೂಸಿ ಹೀಗೆ ಬರೆಯುತ್ತಾರೆ- ನ್ಯಾಯ ಪಾಲಿಸಲು ಆಡಳಿತಾಧಿಕಾರಿಗಳಿಗೆ ಗ್ರಂಥ ಮತ್ತು ತಕ್ಕಡಿ ಅಗತ್ಯವಾಗಿ ಬೇಕಾಗುತ್ತದೆ. ಏಕೆಂದರೆ ಹೆಚ್ಚಿನ ಜನರು ಅಕ್ರಮ-ಅನ್ಯಾಯವನ್ನು ತಮ್ಮ ಅಭ್ಯಾಸವಾಗಿ ಮಾಡಿಕೊಂಡಿರುತ್ತಾರೆ. (ರೂಹುಲ್ ಮುಆನಿ)

ಅಲ್ಲಾಹನ ಗ್ರಂಥವು ತಾನಾಗಿಯೇ ನ್ಯಾಯ ಸ್ಥಾಪನೆ ಮಾಡುವುದಿಲ್ಲ, ಅದು ತನ್ನ ಮೇಲೆ ವಿಶ್ವಾಸವಿರಿಸಿದವರ ಆಡಳಿತ ಸ್ಥಾಪಿಸಬಲ್ಲದು. ಇದನ್ನೇ ಹಾಫಿಝ್ ಇಬ್ನು ಹಜರ್ ಹೀಗೆ ಬರೆಯುತ್ತಾರೆ- ''ಸತ್ಯದ ವೈರಿಗಳ ಮತ್ತು ವಿರೋಧಿಗಳ ದಮನಕ್ಕೆ ಅಧಿಕಾರ ಅಗತ್ಯವಾಗಿದೆ.''

ಇದೇ ಅರ್ಥ ಬರುವ ಒಂದು ಹದೀಸ್ ಹೀಗಿದೆ- ಕುರ್‌ಆನ್ ತಡೆಗಟ್ಟದಂತಹ ವಿಷಯವನ್ನು ಅಲ್ಲಾಹನು ಅಧಿಕಾರದ ಮೂಲಕ ತಡೆಗಟ್ಟುತ್ತಾನೆ.

ಕುರ್‌ಆನ್ ತಾನಾಗಿ ಅಕ್ರಮಿಯ ಕೈ ಹಿಡಿಯುವುದಿಲ್ಲ, ವ್ಯಭಿಚಾರಿಗೆ ಛಡಿಯೇಟು ಬಾರಿಸುವುದಿಲ್ಲ, ಕಳ್ಳನ ಕೈ ಕಡಿಯುವುದಿಲ್ಲವೆಂಬುದು ವ್ಯಕ್ತ. ಅದರ ಆಜ್ಞೆಗಳನ್ನು ಜಾರಿಗೊಳಿಸಲು ಅಧಿಕಾರದ ಅಗತ್ಯವಿದೆ. ಅಧಿಕಾರವು ಸ್ವಯಂ ಗುರಿಯಲ್ಲ, ಅದು ಮಾನವರ ಇಹ-ಪರಗಳ ಯಶಸ್ಸಿಗಾಗಿ ಅಲ್ಲಾಹನು ಅವತೀರ್ಣ ಗೊಳಿಸಿದ ಕಾನೂನನ್ನು ಜಾರಿಗೊಳಿಸುವುದಕ್ಕೆ ಅಗತ್ಯವಾಗಿದೆ. ಅಲ್ಲಾಹನು ತನ್ನ ಅಂತಿಮ ಪ್ರವಾದಿಗೆ(ಸ) ಅಧಿಕಾರ ಶಕ್ತಿಯನ್ನು ಬೇಡಲು ಕಲಿಸಿದ್ದೇಕೆ? ಎಂಬುದು ಗಮನಾರ್ಹವಾಗಿದೆ. ಈ ಸಂದರ್ಭದಲ್ಲಿ ಬನೀ ಇಸ್ರಾಈಲ್ ಅಧ್ಯಾಯದ 80ನೇ ಸೂಕ್ತ ಮತ್ತು ಅದರ ವ್ಯಾಖ್ಯಾನವನ್ನು ನೋಡಬೇಕು.

## ಆಧಾರ: 4

## ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿಗೆ ವಿರುದ್ಧವಾಗಿ ಆಜ್ಞೆ ಹಾಗೂ ತೀರ್ಪು ನೀಡುವವರು ಕಾಫಿರ್, ಝಾಲಿಮ್ ಮತ್ತು ಫಾಸಿಕ್‌ಗಳಾಗಿದ್ದಾರೆ.

ಅಲ್‌ಮಾಇದಃ ಅಧ್ಯಾಯದಲ್ಲಿ ತೌರಾತನ್ನು ಅವತೀರ್ಣಗೊಳಿಸಿದ ಬಗ್ಗೆ ಹಾಗೂ ಬನೀ ಇಸ್ರಾಈಲ್ ಜನಾಂಗದ ಪ್ರವಾದಿಗಳು, ವಿದ್ವಾಂಸರು ಮತ್ತು ಕರ್ಮಶಾಸ್ತ್ರ ಪಂಡಿತರು ತೌರಾತ್‌ಗೆ ಅನುಸಾರವಾಗಿ ಮಾಡುತ್ತಿದ್ದ ತೀರ್ಮಾನಗಳ ಬಗ್ಗೆ ಪ್ರಸ್ತಾಪಿಸಿದ ಬಳಿಕ, ಯಾರು ಅಲ್ಲಾಹನು ಅವತೀರ್ಣಗೊಳಿಸಿರುವುದಕ್ಕನುಸಾರವಾಗಿ ತೀರ್ಮಾನ ಮಾಡುವುದಿಲ್ಲವೋ ಅವರೇ ಕಾಫಿರರು (ಸತ್ಯನಿಷೇಧಿಗಳು) ಎನ್ನಲಾಗಿದೆ. (ಸೂಕ್ತ: 44) ತರುವಾಯ ತೌರಾತ್‌ನ ಪ್ರತೀಕಾರ ನಿಯಮಗಳ ಬಗ್ಗೆ ಪ್ರಸ್ತಾಪಿಸಿದ ಬಳಿಕ ಯಾರು ಅಲ್ಲಾಹನು ಅವತೀರ್ಣಗೊಳಿಸಿ ರುವುದಕ್ಕನುಸಾರವಾಗಿ ತೀರ್ಮಾನಿಸುವುದಿಲ್ಲವೋ ಅವರೇ ಝಾಲಿಮ್(ಅಕ್ರಮಿ) ಗಳು ಎನ್ನಲಾಗಿದೆ. (ಸೂಕ್ತ: 45) ಅನಂತರ ಈಸಾ ಮಸೀಹ್‌ರ(ಅ) ನೇಮಕ ಮತ್ತು ಇಂಜೀಲ್‌ನ ಅವತೀರ್ಣದ ಕುರಿತು ಪ್ರಸ್ತಾಪಿಸಿ, ಯಾರು ಅಲ್ಲಾಹನು ಅವತೀರ್ಣಗೊಳಿಸಿ ರುವುದಕ್ಕನುಸಾರವಾಗಿ ತೀರ್ಮಾನಿಸುವುದಿಲ್ಲವೋ ಅವರೇ ಫಾಸಿಕರು (ಕರ್ಮಭ್ರಷ್ಟರು) ಎಂದು ಹೇಳಲಾಗಿದೆ.

ಈ ಸೂಕ್ತಗಳಲ್ಲಿ ಜೀವನದ ಎಲ್ಲ ವ್ಯವಹಾರಗಳಲ್ಲೂ, ವಿವಾದಗಳಲ್ಲೂ ಅಲ್ಲಾಹನ ಗ್ರಂಥದ ಪ್ರಕಾರ ತೀರ್ಮಾನ ಕೈಗೊಳ್ಳುವುದು ಕಡ್ಡಾಯವೆಂದೂ ಹಾಗೆ ಮಾಡದವನು ಕಾಫಿರ್, ಝುಾಲಿಮ್ ಮತ್ತು ಫಾಸಿಕ್ ಆಗುತ್ತಾನೆಂದೂ ಹೇಳಲಾಗಿದೆ. ಧರ್ಮದಲ್ಲಿ ವ್ಯವಹಾರಗಳಿಗೆ ಆರಾಧನೆಗಳಿಗಿಂತ ಕಡಿಮೆ ಮಹತ್ವವಿಲ್ಲ, ಅದರಲ್ಲಿ ರಾಜಕೀಯ ಮತ್ತು ಆಡಳಿತಾಧಿಕಾರಿಗಳಿಗೆ ದೇವಾರಾಧನೆಗಿರುವಷ್ಟೇ ಮಹತ್ವವಿದೆಯೆಂದು ಇದು ಸ್ಪಷ್ಟಪಡಿಸುತ್ತದೆ. ಮಸೀದಿಯ ಚಾಪೆಗಳು ಮತ್ತು ಸಾಲುಗಳಲ್ಲಿ ಧರ್ಮಸಂಸ್ಥಾಪನೆಯು ಎಷ್ಟು ಅಗತ್ಯವೋ ಅಷ್ಟೇ ಅಗತ್ಯ ಆಡಳಿತ ಮತ್ತು ನ್ಯಾಯ ಪೀಠದಲ್ಲೂ ಇದೆಯೆಂಬುದಕ್ಕೆ ಈ ಸೂಕ್ತಗಳು ಸ್ಪಷ್ಟ ಪುರಾವೆಗಳಾಗಿವೆ. ಆದರೆ ಅಲ್ಲಾಹನ ಗ್ರಂಥದ ಪ್ರಕಾರ ತೀರ್ಮಾನ ಕೈಗೊಳ್ಳುವುದರ ರೂಪಗಳು ವಿಭಿನ್ನವಾಗಿದೆ ಮತ್ತು ಪ್ರತಿಯೊಂದು ರೂಪಕ್ಕೂ ಬೇರೆ ಬೇರೆ ವಿಧಿಗಳಿವೆ.

ಇದನ್ನು ಸೈಯದ್ ಮೌದೂದಿಯವರ ವ್ಯಾಖ್ಯಾನವು ಇನ್ನಷ್ಟು ಸ್ಪಷ್ಟಪಡಿಸುತ್ತದೆ. ಅವರು ಹೀಗೆ ಬರೆಯುತ್ತಾರೆ- ದೇವಾಜ್ಞೆಯನ್ನು ತಪ್ಪು ಹಾಗೂ ತನ್ನ ಮತ್ತು ಇತರ ಮಾನವರ ಆಜ್ಞೆ ಸರಿಯೆಂದು ಪರಿಗಣಿಸಿ ದೇವಾಜ್ಞೆಗೆ ವಿರುದ್ಧವಾಗಿ ತೀರ್ಮಾನಿಸುವವನು ಅಪ್ಪಟ ಕಾಫಿರ್, ಝುಾಲಿಮ್ ಮತ್ತು ಫಾಸಿಕ್ ಆಗುತ್ತಾನೆ. ಓರ್ವನು ದೇವಾಜ್ಞೆಯನ್ನು ಸತ್ಯವೆಂದು ತಾತ್ವಿಕವಾಗಿ ನಂಬಿ, ಕಾರ್ಯತಃ ಅದಕ್ಕೆ ವಿರುದ್ಧವಾಗಿ ತೀರ್ಮಾನ ಕೈಗೊಂಡರೆ ಆತನು ಸಮುದಾಯ ಭ್ರಷ್ಟನಾಗುವುದಿಲ್ಲ, ಆದರೂ ಆತನು ತನ್ನ ವಿಶ್ವಾಸದಲ್ಲಿ ಕುಫ್ರ್, ಝುಲ್ಮ್ ಮತ್ತು ಫಿಸ್ಕ್‌ಗಳನ್ನು ಬೆರೆಸಿದ್ದಾನೆ. ಹಾಗೆಯೇ ಓರ್ವನು ತನ್ನ ಎಲ್ಲಾ ವ್ಯವಹಾರಗಳಲ್ಲಿ ದೇವಾಜ್ಞೆಗೆ ಅವಿಧೇಯತೆ ತೋರುತ್ತಿದ್ದರೆ ಅವನು ಎಲ್ಲ ವಿಷಯಗಳಲ್ಲೂ ಕಾಫಿರ್, ಝುಾಲಿಮ್ ಮತ್ತು ಫಾಸಿಕ್ ಆಗುತ್ತಾನೆ. ಓರ್ವನು ಕೆಲವು ವಿಷಯಗಳಲ್ಲಿ ಆಜ್ಞಾನುಸರಣೆಯನ್ನೂ ಇನ್ನು ಕೆಲವು ವಿಷಯಗಳಲ್ಲಿ ಆಜ್ಞೋಲ್ಲಂಘನೆಯನ್ನೂ ಮಾಡುತ್ತಿದ್ದರೆ ಅವನ ಜೀವನದಲ್ಲಿ ಅನುಸರಣೆಯ ಪ್ರಮಾಣದಲ್ಲಿ ಇಸ್ಲಾಮ್ ಮತ್ತು ಈಮಾನ್ ಹಾಗೂ ಉಲ್ಲಂಘನೆಯ ಪ್ರಮಾಣದಲ್ಲಿ ಕುಫ್ರ್, ಝುಲ್ಮ್ ಮತ್ತು ಫಿಸ್ಕ್‌ಗಳಿರುತ್ತದೆ.

(ತಫ್ಹೀಮುಲ್ ಕುರ್‌ಆನ್ ಸಂಪುಟ 1 – ಅಲ್‌ಮಾಇದಃ ಟಿಪ್ಪಣಿ– 77)

ಈ ಸೂಕ್ತಗಳಲ್ಲಿ ಕಾಫಿರ್, ಝುಾಲಿಮ್ ಮತ್ತು ಫಾಸಿಕ್ ಎಂದು ತೌರಾತ್ ಮತ್ತು ಇಂಜೀಲ್‌ನ ಪ್ರಕಾರ ತೀರ್ಮಾನ ಮಾಡದ ಗ್ರಂಥದವರಾದ ಯಹೂದಿ ಮತ್ತು ಕ್ರೈಸ್ತರು ಕುರಿತು ಹೇಳಲಾಗಿದೆ, ಮುಸಲ್ಮಾನರನ್ನು ಅಭಿಸಂಬೋಧಿಸಲಾಗಿಲ್ಲವೆಂದು ಕೆಲವರು ಭಾವಿಸುತ್ತಾರೆ. ಈ ಸಂದೇಹಕ್ಕೆ ಈ ಸೂಕ್ತಗಳಲ್ಲೂ ಉತ್ತರವಿದೆ. ಅಲ್ಲಾಹನ ನಿಷ್ಠುರ ನ್ಯಾಯದ ಕಾನೂನಿನಲ್ಲೂ ಇದೆ. ಸಹಾಬಿಗಳು ಮತ್ತು ತಾಬಿಈಗಳ ಸ್ಪಷ್ಟೀಕರಣಗಳಲ್ಲೂ ಇದೆ.

ಈ ಸೂಕ್ತದಲ್ಲಿರುವ ಅದರ ಉತ್ತರ ಹೀಗಿದೆ: ''ಎಲ್ಲ ಕಡೆಗಳಲ್ಲೂ ಯಾರು ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನಂತೆ ತೀರ್ಮಾನ ಕೈಗೊಳ್ಳುವುದಿಲ್ಲವೋ'' ಎಂಬ ಸಾಮಾನ್ಯ ಪದಗಳನ್ನು ಬಳಸಲಾಗಿದೆ. ಇಲ್ಲಿ ಯಾರು ತೌರಾತ್‌ನಂತೆ ತೀರ್ಮಾನ ಮಾಡುವುದಿಲ್ಲವೋ

ಅಥವಾ ಇಂಜೀಲ್‌ನಂತೆ ತೀರ್ಮಾನ ಮಾಡುವುದಿಲ್ಲವೋ ಅವನು ಕಾಫಿರ್, ಝ್ವಾಲಿಮ್ ಮತ್ತು ಫಾಸಿಕ್ ಎಂದು ಹೇಳಲಾಗಿಲ್ಲ. ಸಾಮಾನ್ಯ ಪದಗಳನ್ನು ಬಳಸಲಾಗಿರುವುದರಿಂದ ಇದು ಕುರ್‌ಆನಿನಂತೆ ತೀರ್ಮಾನ ಮಾಡದವರಿಗೂ ಅನ್ವಯಿಸುತ್ತದೆ.

ಅಲ್ಲಾಹನ ನಿಷ್ಠುರ ನ್ಯಾಯದ ಉತ್ತರ ಹೀಗಿದೆ- ಯಹೂದಿಗಳು ಮತ್ತು ಕ್ರೈಸ್ತರು ತೌರಾತ್ ಮತ್ತು ಇಂಜೀಲ್‌ನಂತೆ ತೀರ್ಮಾನ ಕೈಗೊಳ್ಳದಿದ್ದರೆ ಅವರನ್ನು ಕಾಫಿರ್, ಝ್ವಾಲಿಮ್ ಮತ್ತು ಫಾಸಿಕ್‌ಗಳು ಎಂದು ಹೇಳಲು ಮತ್ತು ಕುರ್‌ಆನಿನಂತೆ ತೀರ್ಮಾನ ಕೈಗೊಳ್ಳದ ಮುಸ್ಲಿಮರು ವಿಶ್ವಾಸಿಗಳು ಮತ್ತು ಅನುಸರಣಶೀಲರು ಎನ್ನಲು ಅಲ್ಲಾಹನಿಗೆ ಮುಸ್ಲಿಮರೊಂದಿಗೆ ವಿಶೇಷ ಸಂಬಂಧವೇನೂ ಇಲ್ಲ.

ಸಹಾಬಿಗಳು ಮತ್ತು ತಾಬಿಈಗಳ ವಿಶ್ಲೇಷಣೆಗಳಲ್ಲಿರುವ ಉತ್ತರ ಹೀಗಿದೆ- ಅವರು ಈ ಸೂಕ್ತಗಳನ್ನು ಗ್ರಂಥದವರಿಗೆ ಸೀಮಿತಗೊಳಿಸಲಿಲ್ಲ. ಒಮ್ಮೆ ಅಲ್ಕಮ ಮತ್ತು ಮಸ್ರೂಕ್‌ರವರು ಅಬ್ದುಲ್ಲಾ ಬಿನ್ ಮಸ್‌ವೂದ್‌ರೊಂದಿಗೆ ಲಂಚದ ಕುರಿತು ಕೇಳಿದರು. ಅವರು ಅದು ಹರಾಮ್ ಎಂದು ಹೇಳಿದರು. ಅವರಿಬ್ಬರೂ ಪುನಃ ಕೇಳಿದರು- ಒಂದು ವಿಷಯದಲ್ಲಿ ತೀರ್ಪು ನೀಡುವಾಗ ಅದರಲ್ಲಿ ಲಂಚ ಸೇರಿದ್ದರೆ? ಅವರು ಅದು ಕುಫ್ರ್ ಆಗಿದೆಯೆಂದು ಉತ್ತರಿಸಿ ಮೇಲಿನ ಸೂಕ್ತವನ್ನು (ಅಲ್‌ಮಾಇದಃ : 44) ಪಠಿಸಿದರು. (ಇಬ್ನು ಕಸೀರ್) ಇಮಾಮ್ ಶಅ್‌ಬೀಯವರು ಈ ಸೂಕ್ತವು ಮುಸ್ಲಿಮರ ಕುರಿತೇ ಅವತೀರ್ಣಗೊಂಡಿದೆಯೆಂದು ಹೇಳುತ್ತಾರೆ. (ಇಬ್ನು ಕಸೀರ್) ಮುಸ್ಲಿಮರು ಇದು ತಮಗೆ ಅನ್ವಯವಾಗುವುದಿಲ್ಲವೆಂದು ಭಾವಿಸಬಾರದೆಂದು ಬಹುಶಃ ಅವರು ಇಷ್ಟು ಒತ್ತು ಕೊಟ್ಟು ಹೇಳಿರಬೇಕು. ಒಮ್ಮೆ ಒಬ್ಬರು ಹುದೈಫಾರೊಂದಿಗೆ ಈ ಮೂರು ಸೂಕ್ತಗಳು ಬನೀ ಇಸ್ರಾಈಲರ ಕುರಿತು ಅವತೀರ್ಣಗೊಂಡಿದೆಯೆಂದು ಹೇಳಿದರು. ಅಲ್ಲಾಹನು ಅವತೀರ್ಣಗೊಳಿಸಿದ ಆಜ್ಞೆಗಳಿಗೆ ವಿರುದ್ಧವಾಗಿ ಯಹೂದಿಯರು ತೀರ್ಮಾನ ಕೈಕೊಂಡರೆ ಅವರು ಕಾಫಿರ್, ಝ್ವಾಲಿಮ್ ಮತ್ತು ಫಾಸಿಕ್‌ಗಳಾಗುತ್ತಾರೆಂಬುದು ಅವರ ಮಾತಿನ ಇಂಗಿತವಾಗಿತ್ತು. ಇದಕ್ಕೆ ಹುದೈಫಾ ಹೀಗೆ ಪ್ರತಿಕ್ರಿಯಿಸಿದರು- ಈ ಬನೀ ಇಸ್ರಾಈಲರು ನಿಮ್ಮ ಪಾಲಿಗೆ ಎಷ್ಟು ಉತ್ತಮ ಸಹೋದರರು! ಕಹಿಯಿರುವುದೆಲ್ಲಾ ಅವರಿಗೆ, ಸಿಹಿಯಾಗಿರುವುದೆಲ್ಲಾ ನಿಮಗೆ ಅಲ್ಲವೆ? ಖಂಡಿತ ಅಲ್ಲ, ಅಲ್ಲಾಹನಾಣೆ! ನೀವೂ ಅವರ ಮಾರ್ಗದಲ್ಲಿ ಅವರ ಪಾದಪಥಗಳನ್ನನುಸರಿಸಿಕೊಂಡು ನಡೆಯುವಿರಿ. (ತಫ್ಹೀಮುಲ್ ಕುರ್‌ಆನ್)

ಈ ಮೂರು ಸೂಕ್ತಗಳ ನಂತರ ಅಲ್ಲಾಹನು ತನ್ನ ಅಂತಿಮ ಪ್ರವಾದಿ(ಸ)ಯವರಿಗೆ ಈ ರೀತಿ ಆದೇಶಿಸುತ್ತಾನೆ- ನಾವು ನಿಮ್ಮ ಮೇಲೆ ಅವತೀರ್ಣಗೊಳಿಸಿದ ಗ್ರಂಥದಲ್ಲಿರುವ ದೇವನ ಕಾನೂನಿನಂತೆ. ಜನರ ಪ್ರಕರಣಗಳಲ್ಲಿ ತೀರ್ಮಾನ ಕೈಗೊಳ್ಳಿರಿ. ನಿಮ್ಮ ಬಳಿಗೆ ಬಂದಿರುವ ಸತ್ಯದಿಂದ ವಿಮುಖರಾಗಿ ಅವರ ಚಿತ್ತಾಕಾಂಕ್ಷೆಗಳನ್ನು ಅನುಸರಿಸಬೇಡಿರಿ. ತರುವಾಯ ಕುರ್‌ಆನಿನ ಪ್ರಕಾರ ತೀರ್ಮಾನ ಮಾಡುವಂತೆ ಪುನಃ 49ನೇ ಸೂಕ್ತದಲ್ಲಿ ಆದೇಶಿಸಿದ ಬಳಿಕ- ಇವರು ನಿಮ್ಮನ್ನು ಗೊಂದಲದಲ್ಲಿ ಸಿಲುಕಿಸಿ ಅಲ್ಲಾಹನು ನಿಮ್ಮ ಮೇಲೆ ಅವತೀರ್ಣಗೊಳಿಸಿದ ಈ ಮಾರ್ಗದರ್ಶನದಿಂದ ಕಿಂಚಿತ್ತೂ ವಿಮುಖರಾಗಿಸದಂತೆ ಜಾಗ್ರತೆ ವಹಿಸಿರಿ ಎಂದು ಹೇಳಲಾಗಿದೆ.

ಈ ಸೂಕ್ತದಲ್ಲಿ ಕುರ್‌ಆನಿನ ಕೆಲವು ಸೂಕ್ತಗಳನ್ನು ಕಡೆಗಣಿಸುವುದರಿಂದ ತಡೆಯಲಾಗಿರುವುದು ಗಮನಾರ್ಹವಾಗಿದೆ. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನನ್ನು ಸಂಪೂರ್ಣವಾಗಿ ಪಾಲಿಸುವಂತೆ ನಮಗೆ ಆದೇಶಿಸುತ್ತಾನೆಂದು ನಮಗೆ ತಿಳಿಯಿತು. ಸತ್ಯದ ಶತ್ರುಗಳು ಸತ್ಯವಿಶ್ವಾಸಿಗಳನ್ನು ಕುರ್‌ಆನಿನಿಂದ ಸಂಪೂರ್ಣ ವಿಮುಖಗೊಳಿಸದಿದ್ದರೂ ಅದರ ಕೆಲವು ಆಜ್ಞೆಗಳಿಂದಾದರೂ ವಿಮುಖಗೊಳಿಸಲು ಪ್ರಯತ್ನಿಸುತ್ತಾರೆಂದೂ ಇದರಿಂದ ತಿಳಿದು ಬಂತು. ಮುಂದೆ 5ನೇ ಸೂಕ್ತದಲ್ಲಿ 'ಇವರೇನು ಅಜ್ಞಾನದ ತೀರ್ಮಾನವನ್ನು ಬಯಸುತ್ತಾರೆಯೇ' ಎಂದು ಹೇಳಲಾಗಿದೆ.

ಈ ಸೂಕ್ತದ ವ್ಯಾಖ್ಯಾನದಲ್ಲಿ ಇಬ್ನು ಕಸೀರ್ ಹೀಗೆ ಬರೆಯುತ್ತಾರೆ- ಚೆಂಗೀಸ್ ಖಾನ್ ತನ್ನ ಆಡಳಿತಕ್ಕೆ ಸಿದ್ಧಪಡಿಸಿದ್ದ ಕಾನೂನು ಸಂಹಿತೆಯು ಅವನ ಕುಟುಂಬ ಇಸ್ಲಾಮ್ ಸ್ವೀಕರಿಸಿದ ನಂತರವೂ ಜಾರಿಯಲ್ಲಿತ್ತು... ಈ ಕಾನೂನು ಸಂಹಿತೆಯು ಅವನ ಕುಟುಂಬದ ಅರಸರು ಮತ್ತು ಅಧಿಕಾರಿಗಳಿಂದ ಅನುಸರಿಸುತ್ತಿದ್ದ ನೈಜ ಶರೀಅತ್ ಆಗಿತ್ತು. ಅವರು ಅದಕ್ಕೆ ಕುರ್‌ಆನ್ ಮತ್ತು ಸುನ್ನತ್‌ಗಿಂತ ಪ್ರಾಶಸ್ತ್ಯ ನೀಡುತ್ತಿದ್ದರು. ಹಾಗೆ ಮಾಡುವವರು ಕಾಫಿರರಾಗಿದ್ದಾರೆ. ಅವರು ಕುರ್‌ಆನಿನ ಆದೇಶಗಳು ಮತ್ತು ಪ್ರವಾದಿಯವರ ಆಜ್ಞೆಗಳ ಕಡೆಗೆ ಮರಳುವ ಮತ್ತು ಎಲ್ಲ ಸಣ್ಣ-ದೊಡ್ಡ ವಿಷಯಗಳಲ್ಲೂ ಅವುಗಳಂತೆ ತೀಮಾನ ಕೈಗೊಳ್ಳುವ ವರೆಗೆ ಅವರನ್ನು ಬಹಿಷ್ಕರಿಸುವುದು ಕಡ್ಡಾಯವಾಗಿದೆ.

## ಆಧಾರ: 5

## ಕಳ್ಳನಿಗೆ ಕೈ ಕಡಿಯುವ ಮತ್ತು ವ್ಯಭಿಚಾರಿಗೆ ಕಲ್ಲೇಟಿನ ಶಿಕ್ಷೆ ವಿಧಿಸುವ ಆಜ್ಞೆಗಳು

ಕುರ್‌ಆನ್ ನಮ್ಮ ಮುಂದಿಡುವ ಧರ್ಮ ಸಂಸ್ಥಾಪನೆಯ ತಾತ್ಪರ್ಯ ಇದೇ ಆಗಿದೆ. ಮಾನವನ ಜೀವ, ಸೊತ್ತು ಮತ್ತು ಮಾನದ ರಕ್ಷಣೆ, ನಾಡಿನ ಶಾಂತಿ, ನೀತಿ-ಚಾರಿತ್ರ್ಯವನ್ನು ಕೇಡಿನಿಂದ ರಕ್ಷಿಸುವುದು ಒಂದು ನಾಗರಿಕ ಸಮಾಜಕ್ಕೆ ಎಷ್ಟು ಅಗತ್ಯವೆಂದು ವಿವರಿಸುವ ಅಗತ್ಯವಿಲ್ಲ, ಅದರ ಹೊರತು ಮಾನವನ ಸುಧಾರಣೆ ಹಾಗೂ ಸಜ್ಜನರ ಸಂಘಟಿತ ವ್ಯವಸ್ಥೆಯ ಉಳಿವು ಸಾಧ್ಯವಿಲ್ಲ, ಮಾನವತೆಯು ಉನ್ನತಿಗೆ ಬೆಳೆಯುವುದೂ ಸಾಧ್ಯವಿಲ್ಲ, ಇಸ್ಲಾಮ್ ನೀಡುವ ಈಮಾನಿನ ಶಿಕ್ಷಣಗಳು, ಮಾನವನ ಮನಮಸ್ತಿಷ್ಕಗಳಲ್ಲಿ ರೂಢಮೂಲಗೊಳಿಸುವ ಪರಲೋಕದ ಕಲ್ಪನೆಗಳು ಹಾಗೂ ಪರಲೋಕದ ಶಾಶ್ವತ ರಕ್ಷೆ-ಶಿಕ್ಷೆಗಳ ವಾಸ್ತವಿಕತೆಗಳು ಇದರ ಭದ್ರ ಬುನಾದಿಗಳಾಗಿವೆ. ಆದರೆ ಕೇವಲ ವಿಶ್ವಾಸ-ನಂಬಿಕೆಗಳಿಂದ ಅಕ್ರಮ-ಹಿಂಸೆಗಳು ಮತ್ತು ಕೆಡುಕುಗಳ ನಿರ್ಮೂಲನೆ ಸಾಧ್ಯವಿಲ್ಲ, ಆದ್ದರಿಂದ ಅದು ವಿಶ್ವಾಸ-ನಂಬಿಕೆಗಳೊಂದಿಗೆ ಈ ರಕ್ಷಣೆಯನ್ನು ಗಳಿಸಲಿಕ್ಕಾಗಿ ಶಿಕ್ಷಾ ನಿಯಮವನ್ನು ನಿಶ್ಚಯಿಸಿದೆ. ಶಾಂತಿ-ಸಮಾಧಾನವನ್ನು ನೆಲೆಗೊಳಿಸಲು ಮತ್ತು ಅಪರಾಧಗಳನ್ನು ತಡೆಗಟ್ಟಲು ಕಾನೂನುಗಳನ್ನು ರಚಿಸಿದೆ. ಮೇಲೆ ತಿಳಿಸಿದಂತೆ ಈ ಶಿಕ್ಷಾ ನಿಯಮವನ್ನು ಜಾರಿಗೊಳಿಸುವುದರ ಮಹತ್ವವು ಆರಾಧನೆಗಳಿಗಿಂತ

ಕಡಿಮೆಯೇನಲ್ಲ, ಆದ್ದರಿಂದಲೇ ಈ ಶಿಕ್ಷಾ ನಿಯಮಗಳು ಜಾರಿಗೊಳ್ಳುವವರೆಗೆ ಧರ್ಮ ಸಂಸ್ಥಾಪನೆಯು ಪೂರ್ಣ ಗೊಳ್ಳುವುದಿಲ್ಲ. ಆಡಳಿತ ಮತ್ತು ರಾಜಕೀಯಕ್ಕೆ ಸಂಬಂಧಿಸಿ ಪವಿತ್ರ ಕುರ್‌ಆನಿನಲ್ಲಿ ಅನೇಕ ಆದೇಶಗಳನ್ನು ನೀಡಲಾಗಿದೆ. ನಾನಿಲ್ಲಿ ಕೇವಲ ಎರಡು ವಿಧಿಗಳನ್ನು ನೀಡುತ್ತೇನೆ- 1) ಕಳ್ಳನ ಕೈ ಕಡಿಯುವುದು. 2) ವ್ಯಭಿಚಾರಿಗೆ ಛಡಿಯೇಟು ಬಾರಿಸುವುದು.

ಕಳ್ಳನ ಕೈ ಕಡಿಯುವುದರ ಆಜ್ಞೆ ನೀಡುವುದಕ್ಕಿಂತ ಮುಂಚೆ ದರೋಡೆಕೋರರಿಗೆ ನೀಡಲಾಗುವ ಶಿಕ್ಷೆಯನ್ನು ಪ್ರಸ್ತಾಪಿಸಲಾಗಿದೆ. ದರೋಡೆಕೋರರು ಮತ್ತು ಕಳ್ಳರ ಶಿಕ್ಷೆಯ ನಡುವೆ ಇರುವ ಹೊಂದಾಣಿಕೆಯ ಪ್ರಜ್ಞೆ ಜಾಗೃತವಾಗಲೆಂದು ನಾನು ಮೊದಲು ಆ ಸೂಕ್ತಗಳನ್ನು ಇಲ್ಲಿ ಕೊಡುತ್ತಿದ್ದೇನೆ.

**''ಅಲ್ಲಾಹ್ ಮತ್ತು ಅವನ ಸಂದೇಶವಾಹಕರ ವಿರುದ್ಧ ಸಮರ ಹೂಡುವವರಿಗೆ ಮತ್ತು ಕ್ಷೋಭೆಯನ್ನುಂಟು ಮಾಡಲಿಕ್ಕಾಗಿಯೇ ಭೂಮಿಯ ಮೇಲೆ ಶ್ರಮಿಸುತ್ತಿರುವವರಿಗೆ ಇರುವ ಶಿಕ್ಷೆಯು ವಧಿಸುವುದು, ಶಿಲುಬೆಗೇರಿಸುವುದು, ಅವರ ಕೈಕಾಲುಗಳನ್ನು ವಿರುದ್ಧ ದಿಕ್ಕಿನಿಂದ ಕಡಿದು ಹಾಕುವುದು ಅಥವಾ ಅವರನ್ನು ಗಡೀಪಾರು ಮಾಡುವುದಾಗಿರುತ್ತದೆ. ಇದು ಇಹಲೋಕದಲ್ಲಿ ಅವರಿಗಿರುವ ಅಪಮಾನ. ಪರಲೋಕದಲ್ಲಿ ಅವರಿಗೆ ಇದಕ್ಕಿಂತಲೂ ಕಠಿಣ ಶಿಕ್ಷೆ ಕಾದಿದೆ. ಆದರೆ ನಿಮ್ಮ ನಿಯಂತ್ರಣಕ್ಕೆ ಬರುವುದಕ್ಕೆ ಮುಂಚೆಯೇ ಪಶ್ಚಾತ್ತಾಪ ಪಟ್ಟು ಮರಳಿದವರ ಬಗ್ಗೆ ಅಲ್ಲಾಹ್ ಕ್ಷಮಾಶೀಲನೂ ಕರುಣಾನಿಧಿಯೂ ಆಗಿರುತ್ತಾನೆಂಬುದು ನಿಮಗೆ ತಿಳಿದಿರಬೇಕು.''**

(ಸೂರಃ ಅಲ್‌ಮಾಇದಃ : 33-34)

ಈ ಶಿಕ್ಷೆಯು ಕೊಳ್ಳೆ ಹೊಡೆಯುವವರು ಮತ್ತು ದರೋಡೆಕೋರರಿಗಾಗಿದೆ. ಇಸ್ಲಾಮೀ ಸಾಮ್ರಾಜ್ಯದ ವಿರುದ್ಧ ಬಂಡಾಯ ನಡೆಸುವವರಿಗೂ ಬುಡಮೇಲುಗೊಳಿಸಲು ಪ್ರಯತ್ನಿಸುವವರಿಗೂ ಈ ಶಿಕ್ಷೆಯಿದೆ. ಕೆಲವು ವಿದ್ವಾಂಸರ ದೃಷ್ಟಿಯಲ್ಲಿ 'ಮುರ್ತದ್'ಗಳಿಗೂ ಧರ್ಮಭ್ರಷ್ಟರಿಗೂ ಇದೇ ಶಿಕ್ಷೆಯಿದೆ. ಈ ಸೂಕ್ತಗಳ ಬಳಿಕ ಕಳ್ಳನ ಕೈ ಕಡಿಯುವ ಶಿಕ್ಷೆಯ ಆದೇಶ ಹೀಗಿದೆ- **''ಕಳ್ಳತನ ಮಾಡಿದ ಪುರುಷನಾಗಿರಲಿ ಸ್ತ್ರೀಯಾಗಿರಲಿ ಇಬ್ಬರ ಕೈಗಳನ್ನೂ ಕಡಿಯಿರಿ. ಇದು ಅವರ ಗಳಿಕೆಯ ಪ್ರತಿಫಲ ಮತ್ತು ಅಲ್ಲಾಹನ ಕಡೆಯಿಂದ ಎಚ್ಚರಿಕೆಯ ಶಿಕ್ಷೆಯಾಗಿದೆ. ಅಲ್ಲಾಹನು ಅಜೇಯನೂ ಯುಕ್ತಿಜ್ಞನೂ ಆಗಿರುತ್ತಾನೆ.''** (ಸೂರಃ ಅಲ್‌ಮಾಇದಃ :38)

ವ್ಯಭಿಚಾರಿಗಳಾದ ಸ್ತ್ರೀ-ಪುರುಷರ ಕುರಿತು ನೀಡಲಾದ ಆದೇಶ ಹೀಗಿದೆ.

**''ಇದೊಂದು ಅಧ್ಯಾಯ, ಇದನ್ನು ನಾವು ಅವತೀರ್ಣಗೊಳಿಸಿದ್ದೇವೆ. ಇದನ್ನು ನಾವು ಕಡ್ಡಾಯಗೊಳಿಸಿರುತ್ತೇವೆ ಮತ್ತು ನೀವು ಪಾಠ ಕಲಿಯುವಂತಾಗಲು ಇದರಲ್ಲಿ ನಾವು ಸುಸ್ಪಷ್ಟ ಆದೇಶಗಳನ್ನು ಅವತೀರ್ಣಗೊಳಿಸಿರುತ್ತೇವೆ. ವ್ಯಭಿಚಾರಿಗಳಾದ ಸ್ತ್ರೀ-ಪುರುಷರಿಗೆ ತಲಾ ನೂರು ಛಡಿಯೇಟು ಬಾರಿಸಿರಿ. ನೀವು ಅಲ್ಲಾಹನ ಮೇಲೂ ಅಂತಿಮ ದಿವಸದ ಮೇಲೂ ವಿಶ್ವಾಸವಿರಿಸುತ್ತೀರಾದರೆ ಅಲ್ಲಾಹನ ಧರ್ಮದ ವಿಷಯದಲ್ಲಿ ಅವರ ಮೇಲಿನ ಕನಿಕರವು ನಿಮ್ಮನ್ನು ತಡೆಯದಿರಲಿ. ಅವರಿಗೆ ಶಿಕ್ಷೆ ಕೊಡುವಾಗ ಸತ್ಯವಿಶ್ವಾಸಿಗಳ ಒಂದು ಸಮೂಹವು ಅಲ್ಲಿ ಉಪಸ್ಥಿತವಿರಲಿ.''** (ಸೂರಃ ಅನ್ನೂರ್ : 1-2)

ಅಧ್ಯಾಯದ ಈ ನಿಷ್ಠುರ ಪೀಠಿಕೆಯಲ್ಲಿ, ಇದರಲ್ಲಿ ನೀಡಲಾಗಿರುವ ಆದೇಶಗಳು ಕಡ್ಡಾಯವಾಗಿದೆ. ಅಲ್ಲಾಹನ ಮೇಲೂ ಪರಲೋಕದ ಮೇಲೂ ವಿಶ್ವಾಸವಿರಿಸುವವನಿಗೆ ಈ ಆದೇಶಗಳ ಪಾಲನೆ ಕಡ್ಡಾಯವೆಂದು ಸ್ಪಷ್ಟವಾಗಿ ತಿಳಿಸಲಾಗಿದೆ. ಅದರ ಬೆನ್ನಲ್ಲೇ ವ್ಯಭಿಚಾರಿಗಳಾದ ಸ್ತ್ರೀ-ಪುರುಷರಿಗೆ ತಲಾ ನೂರು ಛಡಿಯೇಟು ಬಾರಿಸುವ ಆಜ್ಞೆ ನೀಡಲಾಗಿದೆ. ಆದ್ದರಿಂದ ಈ ಶಿಕ್ಷೆಯನ್ನು ಜಾರಿಗೊಳಿಸುವುದು ಮುಸ್ಲಿಮರ ಬಾಧ್ಯತೆಯಾಗಿದೆ.

ಈ ಎರಡು ಸೂಕ್ತಗಳಲ್ಲಿ ಮುಸ್ಲಿಮ್ ಸಮುದಾಯವನ್ನು ಒಟ್ಟಾಗಿ ಅಭಿಸಂಬೋಧಿಸಲಾಗಿದೆ. ಆದರೆ ಶಿಕ್ಷೆ ಜಾರಿಗೊಳಿಸುವುದು ಆಡಳಿತ ವ್ಯವಸ್ಥೆಯ ಕೆಲಸವಾಗಿದೆ. ಏಕೆಂದರೆ ಕಾನೂನನ್ನು ಕೈಗೆತ್ತಿಕೊಳ್ಳಲು ಎಲ್ಲರಿಗೂ ಅನುಮತಿಯಿಲ್ಲ, ಅದರ ಅನುಮತಿ ನೀಡಿದರೆ ಅರಾಜಕತೆಯುಂಟಾಗಿ ಒಕ್ಕೂಟವು ಛಿದ್ರ ಛಿದ್ರವಾಗುವುದರಲ್ಲಿ ಸಂದೇಹವಿಲ್ಲ, ಈ ಶಿಕ್ಷೆಯನ್ನು ಮುಸ್ಲಿಮರ ಪ್ರತಿನಿಧಿಗಳಾದ ಆಡಳಿತಾಧಿಕಾರಿಗಳು ಜಾರಿಗೊಳಿಸುವರು. ಮುಸ್ಲಿಮರ ಆಡಳಿತ ಇರುವಲ್ಲಿ ಶರೀಅತ್‌ನಲ್ಲಿ ನಿಶ್ಚಯಿಸಲಾದ ಶಿಕ್ಷಾ ನಿಯಮಗಳು ಜಾರಿಗೊಳ್ಳುತ್ತವೋ ಇಲ್ಲವೋ ಎಂದು ನೋಡುವುದು ಮುಸ್ಲಿಮರ ಕೆಲಸವಾಗಿದೆ. ಅದು ಜಾರಿಗೊಳ್ಳುವುದಾದರೆ ಸರಿ, ಅನ್ಯಥಾ ಅದನ್ನು ಜಾರಿಗೊಳಿಸುವಂತೆ ಆಡಳಿತದ ಮೇಲೆ ಒತ್ತಡ ಹೇರಬೇಕು. ಅದಕ್ಕೆ ಆಡಳಿತವು ಸಿದ್ಧವಿಲ್ಲವೆಂದಾದರೆ ಆ ಆಡಳಿತ ವ್ಯವಸ್ಥೆಯನ್ನು ಬದಲಾಯಿಸಲು ಪ್ರಬಲ ಹೋರಾಟ ನಡೆಸಬೇಕು. ಯಾವುದೇ ದೇಶದಲ್ಲಿ ಕುರ್‌ಆನಿನ ಈ ಆದೇಶವನ್ನು ಜಾರಿಗೊಳಿಸಬಲ್ಲ ರಾಜಕೀಯ ಅಧಿಕಾರವಿಲ್ಲವೆಂದಾದರೆ ಇಸ್ಲಾಮೀ ಆಂದೋಲನದ ಸಂದೇಶ ಪ್ರಚಾರದ ಪ್ರಥಮ ಹಂತದಿಂದ ಕೊನೆಯ ಹಂತದ ವರೆಗೂ ಅಂತಹ ಒಂದು ರಾಜಕೀಯ ಆಡಳಿತ ವ್ಯವಸ್ಥೆಯನ್ನು ಸ್ಥಾಪಿಸಲು ಹೋರಾಟ ನಡೆಸುವುದು ಕಡ್ಡಾಯವಾಗಿದೆ.

## ಆಧಾರ: 6

## 'ಇಕಾಮತುದ್ದೀನ್' ಎಂಬ ಹೆಸರಲ್ಲಿ ಕುರ್‌ಆನಿನ ಸ್ಪಷ್ಟ ಆಜ್ಞೆ.

ಕುರ್‌ಆನಿನಲ್ಲಿ 'ಇಕಾಮತುದ್ದೀನ್' ಎಂಬ ಪದವು ಈ ಕೆಳಗಿನ ಸೂಕ್ತದಲ್ಲಿ ಬಂದಿದೆ. **''ಅವನು ನೂಹರಿಗೆ ಆಜ್ಞಾಪಿಸಿದ್ದ ಧರ್ಮ ವಿಧಾನವನ್ನೇ ನಿಮಗಾಗಿಯೂ ನಿಶ್ಚಯಿಸಿಕೊಟ್ಟಿದ್ದಾನೆ ಮತ್ತು (ಮುಹಮ್ಮದ್‌ರವರೇ) ಈಗ ಅದನ್ನೇ ನಾವು ನಿಮ್ಮ ಕಡೆಗೆ ಕಳಿಸಿರುತ್ತೇವೆ. ಇದನ್ನೇ ನಾವು ಇಬ್ರಾಹೀಮ್, ಮೂಸಾ ಮತ್ತು ಈಸಾರಿಗೂ ಬೋಧಿಸಿದ್ದೆವು. ಈ ಧರ್ಮವನ್ನು ಸಂಸ್ಥಾಪಿಸಿರಿ ಮತ್ತು ಇದರಲ್ಲಿ ಭಿನ್ನ ಭಿನ್ನರಾಗದಿರಿ ಎಂಬ ಆದೇಶದೊಂದಿಗೆ.''** (ಸೂರಃ ಅಶ್ಶೂರಾ: 13)

ಶಾಹ್ ವಲಿಯುಲ್ಲಾಹ್ ದೆಹ್ಲವಿಯವರು ಇದರಲ್ಲಿರುವ ಧರ್ಮ ಎಂಬ ಪದಕ್ಕೆ 'ಸಂವಿಧಾನ' ಎಂಬ ಅರ್ಥ ಕೊಟ್ಟಿದ್ದಾರೆ. 'ಅಕೀಮುದ್ದೀನ್' ಅಥವಾ ಧರ್ಮವನ್ನು ಸಂಸ್ಥಾಪಿಸಿರಿ ಎಂಬುದರ ಸ್ಪಷ್ಟ ತಾತ್ಪರ್ಯವು, ಪ್ರವಾದಿಗಳಿಗೆ ಸಂಸ್ಥಾಪಿಸಲು ಆದೇಶಿಸಲಾಗಿದ್ದ ಧರ್ಮವು ಮಾನವ ಜೀವನದ ಸಂವಿಧಾನ ಮತ್ತು ನಿಯಮಾವಳಿಯಾಗಿತ್ತು, ಅದನ್ನು ಅಲ್ಲಾಹನು ಮಾನವರ ಇಹ-ಪರಲೋಕಗಳ ವಿಜಯಕ್ಕಾಗಿ ಅವತೀರ್ಣಗೊಳಿಸಿದ್ದನು ಎಂದಾಗಿದೆ.

ಧರ್ಮ ಸಂಸ್ಥಾಪನೆಯಲ್ಲಿ ಧರ್ಮದ ಸಕಲ ವಿಷಯವೂ ಒಳಗೊಂಡಿದೆ. ಆದಮ್(ಅ) ಮತ್ತು ಇತರೆಲ್ಲ ಪ್ರವಾದಿಗಳನ್ನು ಖಿಲಾಫತ್‌ನ ಉನ್ನತ ಹುದ್ದೆಗೆ ನೇಮಿಸಲಾಗಿತ್ತೆಂದು ಈ ಹಿಂದೆ ಸ್ಪಷ್ಟ ಪಡಿಸಲಾಗಿದೆ. 'ಖಿಲಾಫತ್' ಎಂಬ ಪದವನ್ನು ಅವರು ಹೀಗೆ ವಿವರಿಸುತ್ತಾರೆ.

ಮುಸ್ಲಿಮ್ ಸಮುದಾಯಕ್ಕೆ ಈ ವಿಷಯ ಚೆನ್ನಾಗಿ ತಿಳಿದಿದೆ. ಪ್ರವಾದಿ ಮುಹಮ್ಮದ್(ಸ) ರನ್ನು ಎಲ್ಲ ಸೃಷ್ಟಿಗಳ ಕಡೆಗೆ ಕಳಿಸಲಾಗಿದೆ. ಅವರು ತಮ್ಮ ಜನತೆಯೊಂದಿಗೆ ಹಲವಾರು ವ್ಯವಹಾರಗಳನ್ನು ಮಾಡಿದರು. ಪ್ರತಿಯೊಂದು ವ್ಯವಹಾರಕ್ಕೂ ಪ್ರತಿನಿಧಿಗಳನ್ನು ನೇಮಿಸಿದರು. ಅವುಗಳ ನಿರ್ವಹಣೆಗೆ ವಿಶೇಷ ಆಸ್ಥೆ ವಹಿಸಿದರು. ಈ ವ್ಯವಹಾರಗಳನ್ನು ಅವಲೋಕಿಸಿದಾಗ ಮತ್ತು ಆಂಶಿಕತೆಯಿಂದ ಪೂರ್ಣತೆಯೆಡೆಗೂ ಪೂರ್ಣತೆಯಿಂದ ಸಮಗ್ರತೆಯೆಡೆಗೂ ತಿರುಗಿಸಿ ನೋಡಿದಾಗ ಆ ಏಕ ಸಮಗ್ರತೆಯೇ 'ಇಕಾಮತುದ್ದೀನ್' ಎನಿಸುತ್ತದೆ. ಇತರೆಲ್ಲವೂ ಅದರ ಅಧೀನದಲ್ಲಿರುತ್ತವೆ.

ಶಾಹ್ ವಲಿಯುಲ್ಲಾಹ್‌ರ ಮಾತಿನ ಇಂಗಿತವೇನೆಂದರೆ, ಓರ್ವ ಪ್ರವಾದಿಯೆಂಬ ನೆಲೆಯಲ್ಲಿ ಮುಹಮ್ಮದ್(ಸ) ಅನೇಕ ಕಾರ್ಯಗಳನ್ನು ನಿರ್ವಹಿಸಿದ್ದಾರೆ. ಅವುಗಳಲ್ಲಿ ಹಲವಾರು ನಿಯಮ-ನಿಬಂಧನೆಗಳು ಪ್ರಧಾನವಾಗಿವೆ. ಈ ಎಲ್ಲ ನಿಯಮ-ನಿಬಂಧನೆಗಳನ್ನು ಒಂದೇ ಪಾರಿಭಾಷಿಕದಡಿಯಲ್ಲಿ ಸೇರಿಸುವುದಾದರೆ ಆ ಪಾರಿಭಾಷಿಕವೇ 'ಇಕಾಮತುದ್ದೀನ್' ಆಗುತ್ತದೆ. ಕುರ್‌ಆನ್, ಹದೀಸ್, ತಫ್ಸೀರ್, ಫಿಕ್ಹ್, ತಾರೀಖ್ ಹಾಗೂ ಇಡೀ ಇಸ್ಲಾಮೀ ಸಾಹಿತ್ಯಗಳನ್ನು ಅಭ್ಯಸಿಸುವ ಯಾರಿಗೂ ಶಾಹ್ ವಲೀಯುಲ್ಲಾರವರ ಈ ಅಭಿಪ್ರಾಯವನ್ನು ನಿರಾಕರಿಸಲು ಸಾಧ್ಯವಿಲ್ಲ, ಏಕೆಂದರೆ ಸಹಾಬಿಗಳ ಕಾಲದಿಂದ ಇಂದಿನ ವರೆಗೂ ವಿದ್ವಾಂಸರು ಇಸ್ಲಾಮ್ ಧರ್ಮದ ಪ್ರಚಾರಕ್ಕೆ ಹಾಗೂ ಅದನ್ನು ಜಾರಿಗೊಳಿಸುವುದಕ್ಕೆ ಇದೇ ಪಾರಿಭಾಷಿಕವನ್ನು ಉಪಯೋಗಿಸುತ್ತಾ ಬಂದಿದ್ದಾರೆ.

'ಇಕಾಮತುದ್ದೀನ್'ನ ಸಮಗ್ರ ಪಾರಿಭಾಷಿಕದಡಿಯಲ್ಲಿ ಎರಡು ಮೂಲಭೂತ ವಿಷಯಗಳನ್ನು ಶಾಹ್‌ವಲಿಯುಲ್ಲಾರವರು ಬೆಟ್ಟು ಮಾಡುತ್ತಾರೆ. 1) ಧರ್ಮದ ಬೋಧನೆಗಳ ಪ್ರಚಾರ, ಕುರ್‌ಆನ್-ಸುನ್ನತ್‌ನ ಶಿಕ್ಷಣ ಮತ್ತು ಹಿತೋಪದೇಶಗಳಾಗಿವೆ. ''ಉಮ್ಮೀ(ನಿರಕ್ಷರಿ)ಗಳ ನಡುವೆ ಅವರಿಂದಲೇ ಒಬ್ಬ ಸಂದೇಶವಾಹಕನನ್ನು ಎಬ್ಬಿಸಿದವನು ಅವನೇ. ಅವರು ಆ ಜನರಿಗೆ ಅವನ ಸೂಕ್ತಗಳನ್ನು ಓದಿ ಹೇಳುತ್ತಾರೆ. ಅವರ ಜೀವನವನ್ನು ಸಂಸ್ಕರಿಸುತ್ತಾರೆ ಮತ್ತು ಅವರಿಗೆ ಗ್ರಂಥ ಮತ್ತು ಸದ್ವಿವೇಕದ ಶಿಕ್ಷಣ ನೀಡುತ್ತಾರೆ.'' (ಸೂರಃ ಅಲ್‌ಜುಮುಅಃ : 2) ಇದೆಲ್ಲವನ್ನೂ ಪ್ರವಾದಿ(ಸ) ತಮ್ಮ ಸಂಗಾತಿಗಳಿಗೆ ಉಪದೇಶಿಸುತ್ತಿದ್ದರೆಂಬುದು ಎಲ್ಲರೂ ತಿಳಿದ ವಿಚಾರ.

**2) ಇಸ್ಲಾಮೀ ನಿಯಮಗಳ ಸಂಸ್ಥಾಪನೆ:** ಪ್ರವಾದಿ(ಸ)ರು ಐದು ಹೊತ್ತಿನ ನಮಾಝ್, ಜುಮಾ ಮತ್ತು ಈದ್ ನಮಾಝ್‌ಗಳನ್ನು ತಾವೇ ವ್ಯವಸ್ಥೆಗೊಳಿಸುತ್ತಿದ್ದರು. ಎಲ್ಲ ಕಡೆ ಇಮಾಮರನ್ನು ನೇಮಿಸುತ್ತಿದ್ದರು. ಝಕಾತ್ ಸಂಗ್ರಹಕ್ಕೆ ಕಾರ್ಯಕರ್ತರನ್ನು ಕಳುಹಿಸುತ್ತಿದ್ದರು

ಮತ್ತು ಅರ್ಹರಲ್ಲಿ ಅದನ್ನು ವಿತರಿಸುತ್ತಿದ್ದರು. ಅದೇ ರೀತಿ ರಮಝಾನ್ ಮತ್ತು ಈದ್‌ನ ಚಂದ್ರ ದರ್ಶನದ ಸಾಕ್ಷಿಗಳ ತನಿಖೆ ನಡೆಸುತ್ತಿದ್ದರು. ಅದರ ಸಾಕ್ಷ್ಯದ ಬಳಿಕ ಉಪವಾಸ ಆಚರಿಸಲು ಮತ್ತು ತೊರೆಯಲು ಆದೇಶಿಸುತ್ತಿದ್ದರು. ಪ್ರವಾದಿ(ಸ) ಹಜ್ಜ್‌ನ ನೇತೃತ್ವವನ್ನು ತಾವೇ ವಹಿಸುತ್ತಿದ್ದರು. (ಅಂದರೆ ಜನರಿಗೆ ತಮ್ಮ ನೇತೃತ್ವದಲ್ಲಿ ಹಜ್ಜ್ ಮಾಡಿಸಿದರು.) ಹಿ.ಶ. 9 ರಲ್ಲಿ ಅವರಿಗೆ ಹಜ್ಜ್ ಯಾತ್ರೆ ಅಸಾಧ್ಯವಾದಾಗ ಹಜ್ಜ್ ಕರ್ಮದ ವ್ಯವಸ್ಥೆ ಮಾಡಲು ಅಬೂಬಕರ್(ರ)ರನ್ನು ಹಜ್ಜ್ ಯಾತ್ರೆಯ ನಾಯಕರಾಗಿ ನೇಮಿಸಿ ಕಳುಹಿಸಿದರು. ಹಾಗೆಯೇ ಜಿಹಾದ್‌ನ ಸಂಸ್ಥಾಪನೆಗಾಗಿ ನಾಯಕರನ್ನು ನೇಮಿಸಿದರು. ಜಿಹಾದ್‌ಗಾಗಿ ಸೇನೆಯನ್ನು ಸಜ್ಜುಗೊಳಿಸಿ ಕಳುಹಿಸುವುದು, ವಿವಾದ-ವ್ಯಾಜ್ಯಗಳ ತೀರ್ಮಾನ ಮಾಡುವುದು, ದೇಶದಲ್ಲಿ ನ್ಯಾಯಾಧೀಶರು(ಕಾಝಿ)ಗಳನ್ನು ನೇಮಿಸುವುದು, ಶರೀಅತ್ ವಿಧಿಸಿದ ಶಿಕ್ಷೆಯನ್ನು ಜಾರಿಗೊಳಿಸುವುದು, ಒಳಿತಿನ ಸ್ಥಾಪನೆ ಮತ್ತು ಕೆಡುಕಿನ ನಿರ್ಮೂಲನೆ ಎಲ್ಲವೂ ಇದರ ವ್ಯಾಪ್ತಿಯಲ್ಲಿ ಬರುತ್ತವೆ. ಪ್ರವಾದಿಯವರ(ಸ) ವಿಯೋಗದ ನಂತರ ಪ್ರಸ್ತುತ ಎಲ್ಲ ಕಾರ್ಯಗಳು 'ಇಕಾಮತುದ್ದೀನ್'ನ ಎಲ್ಲ ವಿವರಣೆಯೊಂದಿಗೆ ಮುಂದಿನವರ ಮೇಲೆ ಕಡ್ಡಾಯವಾಯಿತು.

ಶಾಹ್ ವಲಿಯುಲ್ಲಾಹ್‌ರ ಈ ವಿವರಣೆಯಿಂದ, ಪ್ರವಾದಿ(ಸ) ಕುರ್‌ಆನ್- ಸುನ್ನತ್‌ನ ಬೋಧನೆಗಳಿಂದ ತೊಡಗಿ ಬದ್ರ್, ಹುನೈನ್, ಖೈಬರ್, ತಬೂಕ್‌ನ ರಣರಂಗದವರೆಗೆ, ಇಸ್ಲಾಮಿನ ಸಂದೇಶ ಪ್ರಚಾರದಿಂದ ತೊಡಗಿ ರಾಷ್ಟ್ರದ ಆಡಳಿತ ವ್ಯವಸ್ಥೆಯವರೆಗೆ ಯಾವೆಲ್ಲ ಕಾರ್ಯಗಳನ್ನು ಮಾಡಿದ್ದರೋ ಅವೆಲ್ಲವೂ 'ಇಕಾಮತುದ್ದೀನ್'ಗೊಳಪಟ್ಟದ್ದು. ಅದರಿಂದ ಯಾವೊಂದು ಅಂಶವೂ ಹೊರತಾಗಿರಲಿಲ್ಲವೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ.

## ಶರೀಅತ್‌ಗಳಲ್ಲಿ ಭಿನ್ನತೆಯು ಆಂಶಿಕವಾಗಿದೆ.

'ಇಕಾಮತುದ್ದೀನ್' ಎಲ್ಲ ಪ್ರವಾದಿಗಳ ಮೇಲೆ ಕಡ್ಡಾಯವಾಗಿತ್ತು. ಪ್ರವಾದಿ(ಸ) ಅವರ ಮೇಲೆ ಅದು ಕಡ್ಡಾಯವಾಗಿದ್ದಂತೆಯೇ ಅವರ ಸಮುದಾಯಕ್ಕೂ ಅದು ಕಡ್ಡಾಯವಾಗಿದೆಯೆಂಬುದನ್ನು ಮೇಲಿನ ಚರ್ಚೆಯಿಂದ ತಿಳಿದುಕೊಂಡೆವು. ಇನ್ನು ಅಲ್ಲಾಹನು ಕಳಿಸಿರುವ ಶರೀಅತ್‌ಗಳ ಮಧ್ಯೆ ಇರುವ ಭಿನ್ನತೆಗಳ ಸ್ವರೂಪವೇನಾಗಿತ್ತೆಂದು ಅರಿಯೋಣ. ಒಂದು ಸಂದೇಹದ ಕಾರಣದಿಂದಾಗಿ ಅದನ್ನು ಸ್ಪಷ್ಟಪಡಿಸುವ ಅಗತ್ಯ ತಲೆದೋರಿದೆ. 'ಇಕಾಮತುದ್ದೀನ್'ನ ಸೂಕ್ತದಲ್ಲಿ ಐವರು ಮಹಾನ್ ಪ್ರವಾದಿಗಳಾದ ನೂಹ್, ಇಬ್ರಾಹೀಮ್, ಮೂಸಾ, ಈಸಾ(ಅ) ಹಾಗೂ ಮುಹಮ್ಮದ್(ಸ) ಅವರ ಹೆಸರೆತ್ತಿ ಅವರಿಗೆ ಅದರ ಆಜ್ಞೆ ನೀಡಲಾಗಿದೆ. ಧರ್ಮ ಸಂಸ್ಥಾಪನೆಯಲ್ಲಿ ಶರೀಅತ್‌ನ ಸ್ಥಾಪನೆಯೂ ಸೇರಿದೆಯೆಂದು ಭಾವಿಸಿದರೆ ಅದು ಸರಿಯಾಗದು. ಏಕೆಂದರೆ ಶರೀಅತ್‌ಗಳು ಬೇರೆ ಬೇರೆಯಾಗಿದ್ದುವು. ಈ ಸಂದೇಹವನ್ನು ನೀಗಿಸಲಿಕ್ಕಾಗಿಯೇ ಶಾಹ್ ವಲೀಯುಲ್ಲಾಹ್ ದೆಹ್ಲವಿಯವರು 'ಹುಜ್ಜತುಲ್ಲಾಹಿಲ್‌ಬಾಲಿಗ' ಎಂಬ ತಮ್ಮ ಸುಪ್ರಸಿದ್ಧ ಗ್ರಂಥದಲ್ಲಿ ಒಂದು ಪ್ರತ್ಯೇಕ ಅಧ್ಯಾಯದಲ್ಲಿ

'ಇಕಾಮತುದ್ದೀನ್'ನ ಸೂಕ್ತವನ್ನು ಉಲ್ಲೇಖಿಸಿ ಈ ರೀತಿ ಸ್ಪಷ್ಟಪಡಿಸಿದ್ದಾರೆ. ಪ್ರವಾದಿಗಳಿಗೆ ಯಾವ ಧರ್ಮದ ಸಂಸ್ಥಾಪನೆಯ ಆಜ್ಞೆ ನೀಡಲಾಗಿತ್ತೋ ಅದರಲ್ಲಿ ಯಾವೆಲ್ಲ ವಿಷಯಗಳು ಶಾಶ್ವತ ಸ್ವರೂಪದ್ದು, ಶರೀಅತ್‌ಗಳು ವಿಭಿನ್ನವಾಗಿರುವುದರ ತಾತ್ಪರ್ಯವೇನು ಮತ್ತು ಭಿನ್ನತೆಗಳ ಸ್ವರೂಪವೇನು ಎಂಬುದನ್ನು ಅರಿಯಬೇಕಾಗಿದೆ. ಎಲ್ಲ ಪ್ರವಾದಿಗಳೂ ಒಮ್ಮತ ಹೊಂದಿರುವ ಮೂಲ ಧರ್ಮವನ್ನು ಸ್ಪಷ್ಟಪಡಿಸುತ್ತಾ ಅವರು ಮೊದಲು ಅಲ್ಲಾಹನ ಸತ್ತೆ ಮತ್ತು ಗುಣಗಳ ಕುರಿತು ಮೂಲಭೂತ ವಿಶ್ವಾಸ ಮತ್ತು ನಂಬಿಕೆಗಳನ್ನು ಪ್ರಸ್ತಾಪಿಸಿದ್ದಾರೆ. ಅನಂತರ ಸತ್ಕರ್ಮಗಳಲ್ಲಿ ಶುಚಿತ್ವ, ನಮಾಝ್, ಝಕಾತ್, ಉಪವಾಸ ವ್ರತ ಮತ್ತು ಹಜ್ಜ್ ಕರ್ಮಗಳ ಫರ್ಝ್‌ಗಳು, ದಿಕ್ರ್, ದುಆ, ಕುರ್‌ಆನ್ ಪಾರಾಯಣ ಮತ್ತಿತರ ಐಚ್ಛಿಕ ಕರ್ಮಗಳ ಕುರಿತು ವಿವರಿಸಿದ್ದಾರೆ. ವಿಶ್ವಾಸ ಮತ್ತು ಕರ್ಮಗಳ ಈ ವಿವರಣೆಯ ಬಳಿಕ ಅವರು ಹೀಗೆ ಬರೆಯುತ್ತಾರೆ-

ಅದೇ ರೀತಿ ನಿಕಾಹ್, ವ್ಯಭಿಚಾರ ನಿಷೇಧ, ಜನರ ನಡುವೆ ನ್ಯಾಯ, ನೀತಿ ಪಾಲನೆ, ಅಕ್ರಮ-ಅನ್ಯಾಯಗಳ ನಿಷೇಧ, ಅಪರಾಧಿಗಳಿಗೆ ಶಿಕ್ಷೆ, ಅಲ್ಲಾಹನ ವೈರಿಗಳೊಂದಿಗೆ ಜಿಹಾದ್, ಅಲ್ಲಾಹನ ಆದೇಶಗಳು ಮತ್ತು ಅವನ ಧರ್ಮದ ಪ್ರಚಾರದ ವಿಷಯದಲ್ಲಿ ಅವರೆಲ್ಲರೂ ಒಮ್ಮತ ಹೊಂದಿದ್ದರು. ಇದುವೇ ಮೂಲ ಧರ್ಮವಾಗಿದೆ. ಆದ್ದರಿಂದಲೇ ಕುರ್‌ಆನ್ ಈ ವಿಷಯಗಳ ಕುರಿತು ಚರ್ಚಿಸಿಲ್ಲ. ಏಕೆಂದರೆ ಕುರ್‌ಆನ್ ಯಾರ ಭಾಷೆಯಲ್ಲಿ ಅವತೀರ್ಣಗೊಂಡಿತ್ತೋ ಅವರ ದೃಷ್ಟಿಯಲ್ಲಿ ಇವೆಲ್ಲವೂ ಅಂಗೀಕೃತ ವಿಷಯವಾಗಿತ್ತು. ಇನ್ನು ಶರೀಅತ್‌ಗಳ ಮಧ್ಯೆ ಇರುವ ಭಿನ್ನತೆಗಳೆಲ್ಲ ಅವುಗಳ ಸ್ವರೂಪ ಮತ್ತು ವಿಧಾನಗಳ ಕುರಿತಾಗಿತ್ತು.

ಮೇಲಿನ ವಾಕ್ಯಗಳು, ಅಲ್ಲಾಹನ ವತಿಯಿಂದ ಕಳಿಸಲ್ಪಟ್ಟ ಎಲ್ಲ ಶರೀಅತ್‌ಗಳೂ ನ್ಯಾಯ ಸ್ಥಾಪನೆ, ಶಿಕ್ಷಾ ನಿಯಮದ ಜಾರಿ ಮತ್ತು ಅಲ್ಲಾಹನ ಮಾರ್ಗದಲ್ಲಿ ಜಿಹಾದ್‌ನಂತಹ ಅತ್ಯುನ್ನತ ಮತ್ತು ಅಂತಿಮವಾಗಿ ರಾಜಕೀಯ-ಸಾಮಾಜಿಕ ನಿಯಮಗಳ ವರೆಗೂ ಒಮ್ಮತ ಹೊಂದಿದ್ದುವು. ಭಿನ್ನತೆಗಳೇನಿದ್ದರೂ ಅವು ಆಂಶಿಕವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತವೆ. ಶಾಹ್ ವಲೀಯುಲ್ಲಾಹ್‌ರವರು ಆಂಶಿಕ ಭಿನ್ನತೆಗಳ ಕೆಲವು ಉದಾಹರಣೆಗಳನ್ನು ಹೀಗೆ ನೀಡುತ್ತಾರೆ- ಮೂಸಾರ(ಅ) ಶರೀಅತ್‌ನಲ್ಲಿ ನಮಾಝ್‌ನ ಕಿಬ್ಲಾ (ಅಭಿಮುಖ ಕೇಂದ್ರ) ಬೈತುಲ್ ಮಕ್ದಿಸ್ ಆಗಿತ್ತು. ನಮ್ಮ ಪ್ರವಾದಿ(ಸ)ಯವರ ಶರೀಅತ್‌ನಲ್ಲಿ ಕಿಬ್ಲಾ 'ಕಅಬಾ' ಆಗಿದೆ. ಅವರ ಶರೀಅತ್‌ನಲ್ಲಿ ವ್ಯಭಿಚಾರಿಗೆ ಕಲ್ಲೆಸೆದು ಕೊಲ್ಲುವ ಶಿಕ್ಷೆಯಿತ್ತು. ನಮ್ಮ ಶರೀಅತ್‌ನಲ್ಲಾದರೋ ವಿವಾಹಿತ ವ್ಯಭಿಚಾರಿಗೆ ಕಲ್ಲೇಟು ಹಾಗೂ ಅವಿವಾಹಿತ ವ್ಯಭಿಚಾರಿಗೆ 100 ಛಡಿಯೇಟಿನ ಶಿಕ್ಷೆಯಿದೆ. ಅವರ ಶರೀಅತ್‌ನಲ್ಲಿ ಕೇವಲ ಪ್ರತೀಕಾರದ ಆದೇಶವಿತ್ತು. ನಮ್ಮ ಶರೀಅತ್‌ನಲ್ಲಿ ಪ್ರತೀಕಾರ ಮತ್ತು ರಕ್ತ ಪರಿಹಾರ ಎರಡೂ ಇದೆ. ಅದೇ ರೀತಿ ಅವರ ನಡುವೆ ಆರಾಧನಾಕರ್ಮಗಳ ಸಮಯ ಹಾಗೂ ಅವುಗಳ ವಿಧಿಗಳು ಮತ್ತು ಶಿಷ್ಟಾಚಾರಗಳು ವಿಭಿನ್ನವಾಗಿದ್ದುವು.

ಪ್ರವಾದಿಗಳಿಗೆ ಸಂಸ್ಥಾಪಿಸಲು ಆಜ್ಞಾಪಿಸಲಾದ ಧರ್ಮದಲ್ಲಿ ನಮಾಝ್‌ನ ಸಂಸ್ಥಾಪನೆ ಖಂಡಿತ ಸೇರಿತ್ತು. ಆದರೆ ಅದರ ಕಿಬ್ಲಾ, ಅದರ ಶಿಷ್ಟಾಚಾರಗಳು ಮತ್ತದರ ಸಮಯಗಳಲ್ಲಿ

ವ್ಯತ್ಯಾಸಗಳೂ ಇದ್ದುವು. ಈ ಕಾರಣದಿಂದಾಗಿ ಧರ್ಮ ಸಂಸ್ಥಾಪನೆಯ ಆಜ್ಞೆಯಿಂದ ನಮಾಝ್ ಹೊರತಾಗಿತ್ತು ಎಂದು ಹೇಳುವುದು ಎಷ್ಟು ಸರಿ ಎಂಬುದು ಮೇಲಿನ ವಾಕ್ಯಗಳಿಂದ ವ್ಯಕ್ತವಾಗುತ್ತದೆ. ಯಾವ ವಿದ್ವಾಂಸನೂ ಹಾಗೆ ಹೇಳಲಾರ. ಅದೇ ರೀತಿ ಶರೀಅತ್‌ನ ವಿಧಿಗಳನ್ನು ಸ್ಥಾಪಿಸುವ ಮತ್ತು ದೇವಮಾರ್ಗದಲ್ಲಿ ಹೋರಾಟ (ಜಿಹಾದ್) ನಡೆಸುವ ಆಜ್ಞೆಯಲ್ಲಿ ಆಂಶಿಕ ಭಿನ್ನತೆಗಳ ಹೊರತಾಗಿಯೂ ಅವು ಧರ್ಮ ಸಂಸ್ಥಾಪನೆಯ ಸಮಗ್ರ ಆಜ್ಞೆಯಲ್ಲಿ ಸೇರಿತ್ತು.

'ಇಕಾಮತುದ್ದೀನ್ ಕಡ್ಡಾಯ'ವೆಂದು ಸಾರುವ ಸೂಕ್ತದಲ್ಲಿ ಕೇವಲ ವಿಶ್ವಾಸ ಮತ್ತು ಆರಾಧನೆಗಳಷ್ಟೇ ಅಲ್ಲ, ದೀನ್ ಮತ್ತು ಶರೀಅತ್ ಒಳಗೊಂಡ ಸಂಪೂರ್ಣ ಧರ್ಮದ ಸಂಸ್ಥಾಪನೆಯ ಆಜ್ಞೆಯೂ ಇತ್ತು ಎಂಬ ವಿಷಯದಲ್ಲಿ ಯಾವುದೇ ಸಂಶಯಕ್ಕೆಡೆಯಿಲ್ಲ, ಅದು ಮಾನವನ ವೈಯಕ್ತಿಕ ಜೀವನಕ್ಕೆ ಸಂಬಂಧಿಸಿದ್ದಾಗಿರಲಿ ಅಥವಾ ಸಾಮೂಹಿಕ ಜೀವನಕ್ಕೆ ಸಂಬಂಧಿಸಿದ್ದಾಗಿರಲಿ.

## ಆಧಾರ- 7 :

## ಇಸ್ಲಾಮಿನ ಪ್ರಾಬಲ್ಯಕ್ಕಾಗಿ ಪರಿಶ್ರಮಿಸುವವರಿಗೆ ಸಹಾಯದ ಭರವಸೆ

ಅಲ್ಲಾಹನು ತನ್ನ ಪ್ರವಾದಿಗಳನ್ನು ಮತ್ತು ಸಂದೇಶವಾಹಕರನ್ನು ಕುಫ್ರ್ ಮತ್ತು ಶಿರ್ಕ್(ಸತ್ಯನಿಷೇಧ ಮತ್ತು ಬಹುದೇವಾರಾಧನೆ)ಗಳ ವಿರುದ್ಧ ಹೋರಾಟ ನಡೆಸಲಿಕ್ಕಾಗಿ ಕಳುಹಿಸಿದಾಗಲೆಲ್ಲ ಅವರಿಗೆ ತನ್ನ ಸಹಾಯದ ವಾಗ್ದಾನ ಮಾಡಲಾಗುತ್ತಿತ್ತು ಎಂದು ಕುರ್‌ಆನಿನ ಅನೇಕ ಸೂಕ್ತಗಳಿಂದ ನಾವು ತಿಳಿಯಬಹುದು. ಸತ್ಯ-ಮಿಥ್ಯದ ಸಂಘರ್ಷದ ಪ್ರತಿಯೊಂದು ನಿರ್ಣಾಯಕ ಘಟ್ಟದಲ್ಲಿ ಅವರಿಗೆ ಸಾಂತ್ವನ ನೀಡಿ, ಅವರ ಆತ್ಮ ಸ್ಥೈರ್ಯವನ್ನು ಹೆಚ್ಚಿಸಿರುವನು ಮತ್ತು ಸತ್ಯದ ವೈರಿ ಶಕ್ತಿಗಳೆದುರು ಸ್ಥಿರವಾಗಿ ನಿಂತು ಆ ಮಾರ್ಗದಲ್ಲಿ ಬರುವ ಎಲ್ಲ ಕಷ್ಟ-ನಷ್ಟಗಳನ್ನು ಸಹಿಸಿಕೊಳ್ಳಬೇಕೆಂದು ಆದೇಶಿಸಿರುವನು. ಸಂಕಷ್ಟದ ವೇಳೆ ಸಹನೆ ವಹಿಸುವುದು ಮತ್ತು ಸತ್ಯದ ಪ್ರಾಬಲ್ಯಕ್ಕಾಗಿ ಅಲ್ಲಾಹನ ಸಹಾಯದ ವಾಗ್ದಾನವು, ಪ್ರವಾದಿಗಳಿಗೆ ವಹಿಸಿಕೊಡಲಾಗಿರುವ ಕಾರ್ಯವು ಅವರ ಮೇಲೆ ಕಡ್ಡಾಯವೆಂಬುದರ ಪುರಾವೆಯಾಗಿದೆ. ಅಲ್ಲಾಹನ ವಾಗ್ದಾನಕ್ಕೆ ಸಂಬಂಧಿಸಿದ ಸೂಕ್ತಗಳೂ ಕೂಡಾ ಪ್ರವಾದಿಗಳಿಗೆ ಸತ್ಯಧರ್ಮವನ್ನು ಮಿಥ್ಯ ಧರ್ಮಗಳ ಮೇಲೆ ಪ್ರಬಲಗೊಳಿಸುವುದು ಪ್ರವಾದಿಗಳಿಗೆ ವಹಿಸಿಕೊಡಲಾದ ಕಾರ್ಯವೆಂದು ಸ್ಪಷ್ಟಪಡಿಸುತ್ತವೆ. ಈ ಸಂಬಂಧ ಇರುವ ಸೂಕ್ತಗಳನ್ನು ನಾವು ನಾಲ್ಕು ವಿಧಗಳಲ್ಲಿ ವಿಂಗಡಿಸಬಹುದು

1. ಎಲ್ಲ ಪ್ರವಾದಿಗಳೊಂದಿಗೆ, ನಾವು ನಿಮಗೆ ಸತ್ಯನಿಷೇಧಿಗಳೆದುರು ವಿಜಯ ನೀಡುವೆನೆಂದು ವಾಗ್ದಾನ ಮಾಡಲಾದ ಸೂಕ್ತಗಳು.
2. ಮೂಸಾ ಮತ್ತು ಹಾರೂನ್(ಅ)ರಿಗೆ ವಿಶೇಷವಾಗಿ ವಾಗ್ದಾನ ಮಾಡಲಾದ ಸೂಕ್ತಗಳು.
3. ಪ್ರವಾದಿ ಮುಹಮ್ಮದ್(ಸ)ರಿಗೆ ವಾಗ್ದಾನ ಮಾಡಲಾದ ಸೂಕ್ತಗಳು.
4. ಮುಸ್ಲಿಮ್ ಸಮುದಾಯಕ್ಕೆ ವಾಗ್ದಾನ ಮಾಡಲಾದ ಸೂಕ್ತಗಳು.

ಈ ನಾಲ್ಕು ವಿಧದ ಸೂಕ್ತಗಳಿಂದ ಸಂಕ್ಷಿಪ್ತಗೊಳಿಸುವ ಉದ್ದೇಶದಿಂದ ಕೇವಲ ಒಂದೊಂದು ಸೂಕ್ತವನ್ನು ಇಲ್ಲಿ ಕೊಡುತ್ತಿದ್ದೇವೆ.

1. "ನಾವು ನಮ್ಮ ಸಂದೇಶವಾಹಕ ದಾಸರಿಗೆ ಮೊದಲೇ ವಾಗ್ದಾನವಿತ್ತಿದ್ದೇವೆ. ಖಂಡಿತವಾಗಿಯೂ ಅವರಿಗೆ ಸಹಾಯ ಮಾಡಲಾಗುವುದು ಮತ್ತು ನಮ್ಮ ಸೇನೆಯೇ ವಿಜಯಿಯಾಗುವುದು." (ಸೂರಃ ಅಸ್ಸಾಫ್ಫಾತ್ : 171–173)

ಈ ಸೂಕ್ತದಿಂದ ಅನೇಕ ವಾಸ್ತವಿಕತೆಗಳು ಅನಾವರಣಗೊಳ್ಳುತ್ತವೆ.

(ಅ) ಮಿಥ್ಯ ಶಕ್ತಿಗಳ ವಿರುದ್ಧ ನಿಮಗೆ ಸಹಾಯ ಮಾಡುವೆನೆಂದು ಎಲ್ಲ ಪ್ರವಾದಿಗಳಿಗೆ ಅಲ್ಲಾಹನ ಪಕ್ಕಾ ಮತ್ತು ಬದಲಾಗದ ತೀರ್ಮಾನವಾಗಿದೆ.

(ಆ) ಪ್ರವಾದಿಗಳು ಮತ್ತವರ ಮೇಲೆ ವಿಶ್ವಾಸವಿರಿಸುವವರ ಸ್ಥಾನವು ಕೇವಲ ಉಪದೇಶ ನೀಡಿ ಮುಗಿಸುವಂತಹ ಉಪದೇಶಕರದ್ದಲ್ಲ, ಬದಲಾಗಿ ವಿಶ್ವ ಸಾಮ್ರಾಟನ ಸೇನೆಯದ್ದಾಗಿದೆ. ಬಂಡುಕೋರರ ವಿರುದ್ಧ ಅಣಿಗೊಂಡು ಸತ್ಯಧರ್ಮವನ್ನು ಮಿಥ್ಯ ಧರ್ಮಗಳ ಮೇಲೆ ಪ್ರಬಲಗೊಳಿಸುವುದು ಅವರ ಕರ್ತವ್ಯವಾಗಿದೆ.

(ಇ) ಪ್ರವಾದಿಗಳು ಯಾವ ಧರ್ಮದ ಹಾಗೂ ಸಂದೇಶದ ವಾಹಕರಾಗಿರುತ್ತಾರೋ ಅದು ಅದನ್ನು ತಿರಸ್ಕರಿಸಿದರೆ ಏನೂ ಆಗದೆಂದು ಭಾವಿಸುವಂತಹ ಕೇವಲ ಬೋಧನೆ, ಸುವಾರ್ತೆ, ಶಿಫಾರಸು ಮತ್ತು ಉಪದೇಶವಲ್ಲ, ಅದೊಂದು ರಾಜ ಶಾಸನವಾಗಿದ್ದು ಅದನ್ನು ನಿರಾಕರಿಸುವುದನ್ನು ರಾಜನು ತನ್ನ ವಿರುದ್ಧ ಬಂಡಾಯ ಮತ್ತು ಸವಾಲೆಂದು ಪರಿಗಣಿಸುತ್ತಾನೆ.

(ಈ) ಬಂಡುಕೋರ ಸೈನ್ಯದ ವಿರುದ್ಧ ರಾಜನ ನಿಷ್ಠಾವಂತ ಸೈನ್ಯವೇ ಕಟ್ಟಕಡೆಗೆ ಯಶಸ್ಸು ಸಾಧಿಸಿ ವಿಜಯ ಹೊಂದುತ್ತದೆ.

2. ಮೂಸಾ–ಹಾರೂನರಿಗೆ ವಿಶೇಷವಾಗಿ ಮಾಡಲಾದ ವಾಗ್ದಾನವನ್ನು ಈ ಕೆಳಗಿನ ಸೂಕ್ತಗಳಿಂದ ತಿಳಿಯಬಹುದು. "ಫಿರ್‌ಔನನು ಭೂಮಿಯಲ್ಲಿ ಬಂಡಾಯವೆದ್ದನು ಮತ್ತು ಅದರ ನಿವಾಸಿಗಳನ್ನು ಪಂಗಡಗಳಾಗಿ ವಿಂಗಡಿಸಿ ಬಿಟ್ಟನು. ಆ ಪೈಕಿ ಒಂದು ಪಂಗಡವನ್ನು ಅವನು ಅಪಮಾನಿಸುತ್ತಿದ್ದನು. ಅವರ ಗಂಡು ಮಕ್ಕಳನ್ನು ವಧಿಸುತ್ತಿದ್ದನು ಮತ್ತು ಹೆಣ್ಣು ಮಕ್ಕಳನ್ನು ಬದುಕಿರಲು ಬಿಡುತ್ತಿದ್ದನು. ನಿಜಕ್ಕೂ ಅವನು ದಂಗೆಕೋರರಲ್ಲಾಗಿದ್ದನು. ನಾವು ಭೂಮಿಯಲ್ಲಿ ತುಳಿಯಲ್ಪಟ್ಟವರ ಮೇಲೆ ಕೃಪೆ ತೋರಬೇಕೆಂದೂ ಅವರನ್ನು ನಾಯಕರಾಗಿ ಮಾಡಿ ಬಿಡಬೇಕೆಂದೂ ಅವರನ್ನೇ ಉತ್ತರಾಧಿಕಾರಿಗಳಾಗಿ ಮಾಡಬೇಕೆಂದೂ– ಭೂಮಿಯಲ್ಲಿ ಅವರಿಗೆ ಪ್ರಭುತ್ವ ನೀಡಬೇಕೆಂದೂ ಫಿರ್‌ಔನ್, ಹಾಮಾನ್ ಮತ್ತು ಅವರ ಸೇನೆಗಳಿಗೆ ಯಾವುದರ ಭಯವಿತ್ತೋ ಅದನ್ನೇ ತೋರಿಸಿಕೊಡಬೇಕೆಂದೂ ಬಯಸಿದ್ದೆವು." (ಸೂರಃ ಅಲ್ ಕಸಸ್: 4–6)

ಬನೀ ಇಸ್ರಾಈಲರಿಗೆ ಉಪಕಾರ ಮಾಡುವುದು, ಅವರನ್ನು ನಾಯಕತ್ವದ ಸ್ಥಾನದಲ್ಲಿ ನೇಮಿಸುವುದು, ಅವರನ್ನು ರಾಷ್ಟ್ರದ ಉತ್ತರಾಧಿಕಾರಿಗಳಾಗಿ ಮಾಡುವುದು, ಭೂಮಿಯ ಮೇಲೆ ಅವರ ಅಧಿಕಾರವನ್ನು ಸ್ಥಾಪಿಸುವುದು, ಫಿರ್‌ಔನ್, ಹಾಮಾನ್ ಮತ್ತವರ

ಸೇನೆಗಳನ್ನು ಸೋಲಿಸುವುದು ಎಂಬ ಅಲ್ಲಾಹನ ಇಚ್ಛೆ ಹೇಗೆ ಪೂರ್ಣಗೊಂಡಿತೆಂಬುದರ ಸಂಪೂರ್ಣ ಮಾಹಿತಿಯು ಮುಂದಿನ ಸೂಕ್ತಗಳಲ್ಲೂ ಇತರ ಅಧ್ಯಾಯಗಳಲ್ಲೂ ವಿವರವಾಗಿ ಬಂದಿದೆ. ಅದರ ಸಾರಾಂಶ ಹೀಗಿದೆ- ಮೂಸಾ ಮತ್ತು ಹಾರೂನರಿಗೆ ಪ್ರವಾದಿತ್ವವನ್ನು ನೀಡಿ ಈ ಹೊಣೆಗಾರಿಕೆಯನ್ನು ನಿರ್ವಹಿಸಲಿಕ್ಕಾಗಿ ನೇಮಿಸಲಾಯಿತು. ಅವರ ಮೂಲಕವೇ ಅಲ್ಲಾಹನ ಇಚ್ಛೆ ಈಡೇರಿತು. ಫಿರ್‌ಔನನ ನಿರಂಕುಶ ಆಡಳಿತದ ವಿರುದ್ಧ ಈ ಇಬ್ಬರು ಪ್ರವಾದಿಗಳನ್ನು ಕಳುಹಿಸುವಾಗ ನೀಡಲಾದ ವಾಗ್ದಾನ ಮತ್ತು ಸುವಾರ್ತೆ ಹೀಗಿತ್ತು: ''**ನಿಮ್ಮ ಸಹೋದರನ ಮುಖಾಂತರ ನಾವು ನಿಮಗೆ ಬೆಂಬಲ ನೀಡುವೆವು. ಅವನು ನಿಮಗೇನೂ ಹಾನಿ ಮಾಡಲಾಗದಂತಹ ವರ್ಚಸ್ಸನ್ನು ನಿಮಗಿಬ್ಬರಿಗೂ ದಯಪಾಲಿಸುವೆವು. ನಮ್ಮ ನಿದರ್ಶನಗಳ ಬಲದಿಂದ ವಿಜಯವು ನಿಮ್ಮ ಹಾಗೂ ನಿಮ್ಮ ಅನುಯಾಯಿಗಳದ್ದೇ ಆಗಿರುವುದು ಎಂದು (ಅಲ್ಲಾಹನು) ಹೇಳಿದನು.**'' (ಸೂರಃ ಅಲ್ ಕಸಸ್:35)

ಕುರ್‌ಆನಿನ ಈ ವಿವರಣೆಗಳನ್ನು ಓದಿದ ಬಳಿಕ ಮೂಸಾ ಮತ್ತು ಹಾರೂನ್(ಅ) ರನ್ನು ಮಿಥ್ಯದ ದಮನಕ್ಕಾಗಿ ಮತ್ತು ಸತ್ಯದ ಪ್ರಾಬಲ್ಯಕ್ಕಾಗಿ ಕಳಿಸಲಾಗಿಲ್ಲವೆಂದು ಯಾರಾದರೂ ಹೇಳಬಲ್ಲರೆ? ಪ್ರವಾದಿತ್ವದ ಪದವಿಗೆ ರಾಜ್ಯಾಧಿಕಾರದೊಂದಿಗೆ ಕೇವಲ ಆಂಶಿಕ ಸಂಬಂಧವಿರುವುದೆಂದು ಯಾರು ತಾನೆ ಭಾವಿಸಬಲ್ಲರು? ಪ್ರವಾದಿಗಳ ನೇಮಕದ ಉದ್ದೇಶದಲ್ಲಿ ಸತ್ಯದ ಪ್ರಾಬಲ್ಯದ ಜೊತೆಗೆ ಅಧಿಕಾರಗಳಿಕೆಯೂ ಸೇರಿದೆಯೆಂಬುದಕ್ಕೆ ಈ ಸೂಕ್ತಗಳಿಗಿಂತ ಬೇರೆ ಆಧಾರದ ಅಗತ್ಯವಿದೆಯೇ? ಏಕೆಂದರೆ ಅಧಿಕಾರವಿಲ್ಲದೆ ಸತ್ಯ ಧರ್ಮದ ಸಂಪೂರ್ಣ ಅನುಸರಣೆಯನ್ನು ಊಹಿಸಲೂ ಸಾಧ್ಯವಿಲ್ಲ.

3. ಪ್ರವಾದಿ ಮುಹಮ್ಮದ್(ಅ) ಅವರಿಗೆ ಮಕ್ಕಾದಲ್ಲಿ ತಮ್ಮ ಸಂದೇಶ ಪ್ರಚಾರ ಕಾರ್ಯ ಆರಂಭಿಸಿದ ಕಾಲದಲ್ಲೇ ನೀಡಲಾದ ಅಧಿಕೃತ ಘೋಷಣೆ ಹೀಗಿತ್ತು- ''**ಸದ್ಯದಲ್ಲೇ ಈ ಪಂಗಡವು ಸೋತು ಹೋಗುವುದು ಮತ್ತು ಇವರೆಲ್ಲರೂ ಬೆನ್ನು ತಿರುಗಿಸಿ ಓಡಿ ಹೋಗುವರು.**'' (54:45) ಕುರ್‌ಆನಿನ ಈ ಸೂಕ್ತದಲ್ಲಿ ಆರಂಭದಲ್ಲೇ ಜನರಿಗೆ ನೀಡಲಾಗುವ ಇಸ್ಲಾಮಿನ ಕರೆಯ ಸ್ವರೂಪವೇನು ಹಾಗೂ ಅದರ ಪರಿಣಾಮ ಏನಾಗಲಿದೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಈ ಬಗ್ಗೆ ಮುಸ್ಲಿಮರಿಗಾಗಲಿ, ಮುಶ್ರಿಕರಿಗಾಗಲಿ ಯಾವುದೇ ತಪ್ಪು ಕಲ್ಪನೆಯಿರಲಿಲ್ಲ. ಇದರಲ್ಲಿ ಸತ್ಯ ಧರ್ಮವನ್ನು ಪ್ರಬಲಗೊಳಿಸಲಿಕ್ಕಾಗಿ ಸಶಸ್ತ್ರ ಹೋರಾಟ ನಡೆಸಬೇಕಾದ ಹಂತವೂ ಬರಬಹುದು ಮತ್ತು ಈ ಧರ್ಮವು ಪ್ರಾಬಲ್ಯ ಪಡೆದೇ ತೀರುವುದು ಎಂದು ಸಾರಿ ಹೇಳಲಾಗಿದೆ.

4. ಮುಸ್ಲಿಮ್ ಸಮುದಾಯದೊಂದಿಗೆ ಕಿಯಾಮತ್‌ನ ವರೆಗೂ ಮಾಡಲಾದ ವಾಗ್ದಾನ ಹೀಗಿದೆ, ''**ಸತ್ಯವಿಶ್ವಾಸಿಗಳೇ! ನೀವು ಅಲ್ಲಾಹನಿಗೆ ಸಹಾಯ ಮಾಡಿದರೆ ಅವನು ನಿಮಗೆ ಸಹಾಯ ಮಾಡುವನು ಮತ್ತು ನಿಮ್ಮ ಪಾದಗಳನ್ನು ಸ್ಥಿರಗೊಳಿಸುವನು.**'' (47:7)

ತನ್ನ ಧರ್ಮದ ಸಹಾಯವನ್ನು ತನಗೆ ಮಾಡುವ ಸಹಾಯವೆಂದು ಹೇಳಿ ಅಲ್ಲಾಹನು ಈ ಸಮುದಾಯದ ಸ್ಥಾನವನ್ನು ಉನ್ನತಗೊಳಿಸಿದ್ದಾನೆ. ಅದಕ್ಕಿಂತಲೂ ಉನ್ನತವಾದ

ಸ್ಥಾನವನ್ನು ಊಹಿಸುವುದೂ ಸಾಧ್ಯವಿಲ್ಲ. ಈ ಸೂಕ್ತದಲ್ಲಿ ಅಲ್ಲಾಹನ ವಾಗ್ದಾನದ ಸ್ವರೂಪವನ್ನು ಸ್ಪಷ್ಟಪಡಿಸಲಾಗಿದೆ. ತನ್ನ ಧರ್ಮದ ಸಹಾಯ ಮಾಡುವ ಕರ್ತವ್ಯವನ್ನು ಈಡೇರಿಸಿದರೆ ತನ್ನ ಸಹಾಯದ ವಾಗ್ದಾನವಿದೆಯೆಂದು ಈ ಮೂಲಕ ಹೇಳುತ್ತಾನೆ.

ಈ ಸೂಕ್ತದಲ್ಲೂ ಕುರ್‌ಆನಿನ ಇನ್ನಿತರ ಸೂಕ್ತಗಳಲ್ಲೂ ಅಲ್ಲಾಹನ ಸಹಾಯವೆಂದರೆ ಅದನ್ನು ಮಿಥ್ಯ ಸಿದ್ಧಾಂತಗಳ ಮೇಲೆ ಪ್ರಬಲಗೊಳಿಸಲಿಕ್ಕಾಗಿ ತನ್ನ ಜೀವ ಮತ್ತು ಸೊತ್ತನ್ನು ಅರ್ಪಿಸುವುದು ಮತ್ತು ಅಲ್ಲಾಹನ ಶತ್ರುಗಳ ವಿರುದ್ಧ ಸರ್ವಸ್ವವನ್ನು ಧಾರೆಯೆರೆಯುವುದಾಗಿದೆ. ಮುಸ್ಲಿಮರು ಈ ಕರ್ತವ್ಯವನ್ನು ನೆರವೇರಿಸಿದರೆ ಅಲ್ಲಾಹನು ಅವರಿಗೆ ಸಹಾಯ ಮಾಡುವನು ಮತ್ತು ಅವರ ಪಾದಗಳನ್ನು ವೈರಿಗಳ ವಿರುದ್ಧ ಸ್ಥಿರಗೊಳಿಸುವನು. ಅಧೀರರಾಗಲು ಬಿಡಲಾರನು. ಅದನ್ನೇ ಇನ್ನೊಂದು ಶೈಲಿಯಲ್ಲಿ ಹೀಗೆ ಹೇಳಲಾಗಿದೆ.

**''ನೀವು ಧೈರ್ಯ ಗುಂದಬೇಡಿರಿ. ವ್ಯಥೆ ಪಡಲೂ ಬೇಡಿರಿ. ನೀವು ವಿಶ್ವಾಸಿಗಳಾಗಿದ್ದರೆ ನೀವೇ ವಿಜಯಿಗಳಾಗುವಿರಿ.''** (3:139)

ಈ ಸೂಕ್ತದಲ್ಲಿ ನೀವು ನಿಷ್ಠಾವಂತ ವಿಶ್ವಾಸಿಗಳಾದರೆ ಪ್ರಾಬಲ್ಯ ಮತ್ತು ವಿಜಯವು ನಿಮಗಾಗಿಯೇ ಇದೆ ಎಂದು ಹೇಳಲಾಗಿದೆ. ನೀವು ತಾತ್ಕಾಲಿಕ ಸೋಲಿನಿಂದ ಧೃತಿಗೆಡಬಾರದು. ಈ ಸೋಲಿಗೆ ಕಾರಣವೇನೆಂದು ಕಂಡುಹಿಡಿಯಬೇಕು. ನಿಮ್ಮ ದೌರ್ಬಲ್ಯಗಳನ್ನು ದೂರಗೊಳಿಸುವ ಮೂಲಕ ನೀವು ನಿಷ್ಠಾವಂತ ವಿಶ್ವಾಸಿಗಳೆಂದು ಸಾಬೀತು ಪಡಿಸಿದರೆ, ಮೇಲೆ ತಿಳಿಸಲಾದಂತೆ, ನೀವೇ ವಿಜಯಿಗಳಾಗುವಿರಿ ಎಂದು ತಿಳಿಸಲಾಗಿದೆ.

ಅಲ್ಲಾಹನ ವಾಗ್ದಾನದ ಈ ಸೂಕ್ತಗಳು, ಧರ್ಮವನ್ನು ಪ್ರಬಲಗೊಳಿಸುವ ಪ್ರಯತ್ನ ಹಾಗೂ ಆ ಮಾರ್ಗದಲ್ಲಿ ತ್ಯಾಗ-ಬಲಿದಾನಗಳು ಕಡ್ಡಾಯವಾಗಿದೆಯೆಂದು ಸ್ಪಷ್ಟಪಡಿಸುತ್ತವೆ. ಅನ್ಯಥಾ ಅಲ್ಲಾಹನು ಇಂತಹ ಶರ್ತ ವಿಧಿಸುತ್ತಿರಲಿಲ್ಲ.

## ಆಧಾರ- 8

## ಪರಿಶ್ರಮದಲ್ಲಿ ಸಂಪತ್ತು ಖರ್ಚು ಮಾಡದೆ, ಅದರಿಂದ ನುಣುಚಿಕೊಳ್ಳುವವರ ಕುರಿತ ವಿಧಿ:

ಅಲ್ಲಾಹನ ಧರ್ಮವನ್ನು ಪ್ರಬಲಗೊಳಿಸುವ ಕಾರ್ಯದಿಂದ ಜಾರಿಕೊಳ್ಳುವವರು ಮತ್ತು ಅದಕ್ಕಾಗಿ ಹಣ ಖರ್ಚು ಮಾಡದವರು ಮುನಾಫಿಕ್‌ಗಳು.

ಕುರ್‌ಆನನ್ನು ಅರ್ಥವರಿತು ಓದುವವರು ಧರ್ಮದ ಉತ್ತುಂಗತೆಗಾಗಿ ಹಣ ಖರ್ಚು ಮಾಡುವುದು ಮತ್ತು ಜೀವಾರ್ಪಣೆ ಮಾಡುವುದು ಈಮಾನಿನ ಲಕ್ಷಣವೆಂದು ಸಾರಲಾಗಿರುವುದನ್ನು ಅನೇಕ ಕಡೆಗಳಲ್ಲಿ ಕಾಣಬಲ್ಲರು. ಇಂತಹ ಎಲ್ಲ ಸೂಕ್ತಗಳಿಂದ ಅಲ್ಲಾಹನ ಮಾರ್ಗದಲ್ಲಿ ಹಣ ಖರ್ಚು ಮಾಡುವುದು ಮತ್ತು ಧರ್ಮ ಸಂಸ್ಥಾಪನಾ ಕಾರ್ಯದಲ್ಲಿ ಸ್ವಯಂ ಭಾಗಿಯಾಗುವುದು ಕಡ್ಡಾಯವಾಗಿದೆ, ಅನ್ಯಥಾ ವಿನಾ ಕಾರಣ ಅದರಿಂದ ದೂರ ನಿಲ್ಲುವವರ ವಿಶ್ವಾಸವೇ ಸಂದೇಹಾಸ್ಪದವೆಂದು ಸ್ಪಷ್ಟವಾಗಿ ತಿಳಿದು ಬರುತ್ತದೆ. ಏಕೆಂದರೆ ಅಲ್ಲಾಹನ ಮೇಲೆ

ವಿಶ್ವಾಸವಿರಿಸುವುದು ಒಂದು ಬಲವಾದ ಒಪ್ಪಂದವಾಗಿದ್ದು ಅದರಲ್ಲಿ ವಿಶ್ವಾಸಿಯು ತನ್ನ ಜೀವ, ಸೊತ್ತು ಮತ್ತು ತನ್ನ ಸರ್ವಸ್ವವನ್ನು ಸ್ವರ್ಗದ ಬದಲಿಗೆ ಖರೀದಿಸುತ್ತಾನೆ. ತನ್ನ ಬಳಿಯಲ್ಲಿರುವುದೆಲ್ಲ ಅಲ್ಲಾಹನ 'ಅಮಾನತ್' ಆಗಿದೆಯೆಂದು ಅವನು ದೃಢವಾಗಿ ನಂಬುತ್ತಾನೆ. ತಾನು ಮೂಮಿನ್ (ವಿಶ್ವಾಸಿ) ಆಗಿದ್ದೇನೆಂದು ವಾದಿಸುವವನು ಅದಕ್ಕೆ ವಿರುದ್ಧವಾಗಿ ವರ್ತಿಸಿದರೆ ಅದು ಕಾಪಟ್ಯದ ಲಕ್ಷಣವೇ ಹೊರತು ಪ್ರಾಮಾಣಿಕತೆಯದ್ದಲ್ಲ.

ನಾನಿಲ್ಲಿ ಕೆಲವು ಸೂಕ್ತಗಳನ್ನು ಉಲ್ಲೇಖಿಸುತ್ತೇನೆ.

1. ಉಹುದ್ ಯುದ್ಧವು ಬಹುಶಃ ವಿಶ್ವಾಸ ಮತ್ತು ಕರ್ಮಗಳ ಕಾಪಟ್ಯ ಬಹಿರಂಗಗೊಂಡ ಇಸ್ಲಾಮ್ ಮತ್ತು ಕುಫ್ರ್‌ನ ನಡುವೆ ನಡೆದ ಪ್ರಥಮ ಯುದ್ಧವಾಗಿತ್ತು. ಅದರಲ್ಲಿ ಮುಸ್ಲಿಮರ ದೊಡ್ಡ ಸತ್ವಪರೀಕ್ಷೆಯಿತ್ತು. ವಿಶ್ವಾಸದಲ್ಲಿ ಕಾಪಟ್ಯ ಹೊಂದಿದ ಒಂದು ದೊಡ್ಡ ಗುಂಪು ಅಬ್ದುಲ್ಲಾ ಬಿನ್ ಉಬೈನ ನೇತೃತ್ವದಲ್ಲಿ ದಾರಿ ಮಧ್ಯೆಯೇ ಮರಳಿತು. ಯುದ್ಧದಲ್ಲಿ ಭಾಗವಹಿಸಲಿಲ್ಲ. ಕರ್ಮ ಪರವಾದ ಕಾಪಟ್ಯದಲ್ಲಿ ಸಿಲುಕಿದ್ದವರು ಇಷ್ಟವಿಲ್ಲದೆ ಹೇಡಿಗಳಾಗಿ ಅರೆ ಮನಸ್ಸಿನಿಂದ ಭಾಗವಹಿಸಿದರು. ಅವರ ಪ್ರಾಣದ ಹೊರತು ಅವರಿಗೆ ಬೇರೆ ಯಾವ ಚಿಂತೆಯೂ ಇರಲಿಲ್ಲ. ಈ ಯುದ್ಧದ ಕುರಿತು ಪೂರ್ಣ ವಿಶ್ಲೇಷಣೆ 'ಆಲಿ ಇಮ್ರಾನ್' ಅಧ್ಯಾಯದಲ್ಲಿದೆ. ಬೆನ್ನುತೋರಿಸಿ ಪಲಾಯನ ಮಾರ್ಗವನ್ನು ಕಂಡುಕೊಂಡವರ ಬಗ್ಗೆ ಹೀಗೆ ಹೇಳಲಾಗಿದೆ– ''ಯುದ್ಧದ ದಿವಸ ನಿಮಗೊದಗಿದ ನಷ್ಟ ಅಲ್ಲಾಹನ ಅಪ್ಪಣೆಯಿಂದಾಗಿತ್ತು. ಅದು ನಿಮ್ಮಲ್ಲಿ ಯಾರು ಸತ್ಯವಿಶ್ವಾಸಿ ಮತ್ತು ಯಾರು ಕಪಟವಿಶ್ವಾಸಿಯೆಂದು ಅಲ್ಲಾಹನು ನೋಡಿಕೊಳ್ಳಲಿಕ್ಕಾಗಿತ್ತು. ಬನ್ನಿರಿ, ಅಲ್ಲಾಹನ ಮಾರ್ಗದಲ್ಲಿ ಯುದ್ಧ ಮಾಡಿರಿ, ಇಲ್ಲವೆ ಕನಿಷ್ಠ ಪಕ್ಷ (ನಿಮ್ಮ ಪಟ್ಟಣದ) ರಕ್ಷಣೆ ಮಾಡಿರಿ ಎಂದು ಕಪಟವಿಶ್ವಾಸಿಗಳೊಡನೆ ಹೇಳಿದಾಗ ಅವರು, ಇಂದು ಯುದ್ಧ ನಡೆಯಲಿರುವುದೆಂದು ನಮಗೆ ತಿಳಿದಿರುತ್ತಿದ್ದರೆ ನಾವು ಖಂಡಿತವಾಗಿಯೂ ನಿಮ್ಮ ಸಂಗಡ ಬರುತ್ತಿದ್ದೆವು ಎನ್ನತೊಡಗಿದರು. ಹೀಗೆ ಹೇಳುತ್ತಿರುವಾಗ ಅವರು ವಿಶ್ವಾಸಕ್ಕಿಂತ ಅವಿಶ್ವಾಸಕ್ಕೆ ಹೆಚ್ಚು ಸಮೀಪವಾಗಿದ್ದರು. ಅವರು ತಮ್ಮ ಹೃದಯಗಳಲ್ಲಿ ಇಲ್ಲದ ಮಾತನ್ನು ತಮ್ಮ ಬಾಯಿಗಳಿಂದ ಹೇಳುತ್ತಾರೆ. ಅವರು ಹೃದಯಗಳಲ್ಲಿ ಬಚ್ಚಿಡುವುದೆಲ್ಲವನ್ನೂ ಅಲ್ಲಾಹನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ಇವರು ಸ್ವತಃ ಕುಳಿತುಕೊಂಡಿದ್ದು, ಯುದ್ಧಕ್ಕೆ ಹೋಗಿ ವಧಿಸಲ್ಪಟ್ಟ ಇವರ ಸಹೋದರರ ಬಗ್ಗೆ, ಅವರು ನಮ್ಮ ಮಾತು ಕೇಳುತ್ತಿದ್ದರೆ ಕೊಲ್ಲಲ್ಪಡುತ್ತಿರಲಿಲ್ಲ ಎಂದು ಬಿಟ್ಟರು. ಅವರೊಡನೆ, ನೀವು ನಿಮ್ಮ ಮಾತಿನಲ್ಲಿ ಸತ್ಯವಂತರಾಗಿದ್ದರೆ ಸ್ವತಃ ನಿಮಗೆ ಮರಣ ಬಂದಾಗ ಅದನ್ನು ಮುಂದೂಡಿ ತೋರಿಸಬೇಕು ಎಂದು ಹೇಳಿರಿ.'' (3: 166–68)

ಈ ಸೂಕ್ತಗಳು, ಅಲ್ಲಾಹನ ಮಾರ್ಗದ ಹೋರಾಟ(ಜಿಹಾದ್)ವು ಈಮಾನಿನ ಮಾನದಂಡವೆಂದೂ ಅದು ವಿಶ್ವಾಸಿಗಳಿಂದ ಕಪಟ ವಿಶ್ವಾಸಿಗಳನ್ನು ಬೇರ್ಪಡಿಸುತ್ತದೆಂದೂ ಸ್ಪಷ್ಟಪಡಿಸುತ್ತದೆ. ಈ ಯುದ್ಧದಲ್ಲಿ ಬೆನ್ನುತೋರಿಸಿ ಪಲಾಯನ ಮಾರ್ಗವನ್ನು ಅವಲಂಬಿಸಿದವರು ಮುನಾಫಿಕರಾಗಿದ್ದರು. ಇದೇ ವಿಷಯವನ್ನು ಇನ್ನೊಂದು ರೀತಿಯಲ್ಲಿ 179ನೇ ಸೂಕ್ತದಲ್ಲಿ

ಹೇಳಲಾಗಿದೆ. ಅದರಲ್ಲಿ ಕಪಟ ವಿಶ್ವಾಸಿಗಳು ಮತ್ತು ಸತ್ಯವಿಶ್ವಾಸಿಗಳ ಬದಲು ಅಶುದ್ಧರು ಮತ್ತು ಶುದ್ಧರು ಎಂಬ ಪದಗಳನ್ನು ಬಳಸಲಾಗಿದೆ. ಅಂದರೆ ಅಲ್ಲಾಹನು ಅಶುದ್ಧರನ್ನೂ (ಮುನಾಫಿಕ್) ಶುದ್ಧರನ್ನೂ (ಮೂಮಿನ್) ಜೊತೆ ಜೊತೆಯಾಗಿರಿಸುವುದು ಆತನ ಯುಕ್ತಿಗೆ ವಿರುದ್ಧವಾಗಿದೆ.

ಅಪವಿತ್ರ ಮತ್ತು ದುಷ್ಟ ಮುನಾಫಿಕರು ಹಾಗೂ ಶುದ್ಧ ಮತ್ತು ಪಾವನ ಮುಸ್ಲಿಮರನ್ನು ಬೇರ್ಪಡಿಸಲಿಕ್ಕಾಗಿ ಮತ್ತು ಅವರ ಪೈಕಿ ಪ್ರಾಮಾಣಿಕರು ಯಾರು, ಕಪಟ ವಿಶ್ವಾಸಿಗಳು ಯಾರು ಎಂಬುದನ್ನು ವಿಶ್ವಾಸಿಗಳು ಕಣ್ಣಾರೆ ಕಾಣಬೇಕೆಂಬುದು ವಿಶ್ವಾಸಿಗಳ ಮಟ್ಟಿಗೆ 'ಉಹುದ್' ಯುದ್ಧದಲ್ಲಿ ಅಡಗಿದ ಯುಕ್ತಿಯಾಗಿತ್ತು. ಒಲ್ಲದ ಮನಸ್ಸಿನೊಂದಿಗೆ ಯುದ್ಧದಲ್ಲಿ ಪಾಲ್ಗೊಂಡವರ ಮನೋಸ್ಥಿತಿಯನ್ನು ಈ ರೀತಿ ಚಿತ್ರಿಸಲಾಗಿದೆ. **''ಈ ದುಃಖದ ಬಳಿಕ ಅಲ್ಲಾಹನು ನಿಮ್ಮಲ್ಲಿ ಕೆಲವರಿಗೆ ಅದೆಂತಹ ಮನಶ್ಶಾಂತಿ ನೀಡಿದನೆಂದರೆ ಅವರು ತೂಕಡಿಸತೊಡಗಿದರು. ಆದರೆ ತಮ್ಮ ಸ್ವಾರ್ಥಕ್ಕೇ ಆದ್ಯತೆ ಕೊಟ್ಟಿದ್ದ ಇನ್ನೊಂದು ಪಂಗಡವು ಅಲ್ಲಾಹನ ಬಗ್ಗೆ ಸತ್ಯಕ್ಕೆ ವಿರುದ್ಧವಾದ ತರತರದ ಅಜ್ಞಾನಜನ್ಯ ಸಂದೇಹಗಳನ್ನು ಮಾಡತೊಡಗಿತು. ಈ ಕಾರ್ಯವೆಸಗುವುದರಲ್ಲಿ ನಮ್ಮ ಪಾಲೇನಾದರೂ ಇದೆಯೇ? ಎಂದು ಈಗ ಅವರು ಕೇಳುತ್ತಾರೆ. ಅವರೊಡನೆ, (ಯಾರದೂ ಯಾವ ಪಾಲೂ ಇಲ್ಲ) ಈ ಕಾರ್ಯ ಸಂಪೂರ್ಣವಾಗಿ ಅಲ್ಲಾಹನ ಅಧೀನವಿದೆ ಎಂದು ಹೇಳಿರಿ. ವಾಸ್ತವದಲ್ಲಿ ಇವರು ತಮ್ಮ ಮನಸ್ಸಿನೊಳಗೆ ಬಚ್ಚಿಟ್ಟ ವಿಷಯಗಳನ್ನು ನಿಮ್ಮ ಮುಂದೆ ಪ್ರಕಟಿಸುವುದಿಲ್ಲ, (ನಾಯಕತ್ವದ) ಅಧಿಕಾರಗಳಲ್ಲಿ ನಮ್ಮ ಪಾಲೂ ಇರುತ್ತಿದ್ದರೆ ಇಲ್ಲಿ ನಾವು ಕೊಲ್ಲಲ್ಪಡುತ್ತಿರಲಿಲ್ಲ ಎಂಬುದೇ ಇವರ ನಿಜವಾದ ಮನದಿಂಗಿತವಾಗಿದೆ. ಅವರೊಡನೆ ಹೇಳಿಬಿಡಿರಿ – ನೀವು ನಿಮ್ಮ ಮನೆಗಳೊಳಗೆ ಇರುತ್ತಿದ್ದರೂ ಯಾರ ಮರಣ ಲಿಖಿತವಾಗಿತ್ತೋ ಅವರು ಸ್ವತಃ ತಮ್ಮ ವಧಾಸ್ಥಾನಗಳ ಕಡೆಗೆ ಹೊರಟು ಬರುತ್ತಿದ್ದರು. ಇದೀಗ ಸಂಭವಿಸಿದ ಘಟನೆಯು ನಿಮ್ಮ ಹೃದಯದೊಳಗೆ ಅಡಗಿದ್ದುದನ್ನು ಅಲ್ಲಾಹನು ಪರೀಕ್ಷಿಸಿಕೊಳ್ಳಲಿಕ್ಕಾಗಿ ಮತ್ತು ನಿಮ್ಮ ಮನಸ್ಸಿನಲ್ಲಿರುವ ಕೇಡನ್ನು ತೊಡೆದು ಹಾಕಲಿಕ್ಕಾಗಿ ಸಂಭವಿಸಿದೆ. ಅಲ್ಲಾಹನು ಹೃದಯ ಗಳೊಳಗಿರುವುದನ್ನು ಚೆನ್ನಾಗಿ ಅರಿತಿರುತ್ತಾನೆ.''** (3: 154)

ಇಲ್ಲಿ ದುರ್ಬಲ ಈಮಾನಿನವರ ಅರ್ಥಾತ್ ಮನಸ್ಸಿನೊಳಗೆ ಈಮಾನ್ ಇನ್ನೂ ಪ್ರವೇಶಿಸಿಲ್ಲದ ಹಾಗೂ ಅಜ್ಞಾನ ಕಾಲದ ವಿಚಾರಗಳು ಇನ್ನೂ ಜೀವಂತವಾಗಿರುವವರ ಮನೋಸ್ಥಿತಿಯನ್ನು ಚಿತ್ರಿಸಲಾಗಿದೆ. ಈ ಸೂಕ್ತದಲ್ಲಿ ಅವರ ವಿಚಾರಗಳನ್ನು ಖಂಡಿಸಿ ಅವರಿಗೆ ಸರಿಯಾದ ಮಾರ್ಗದರ್ಶನ ಮಾಡಲಾಗಿದೆ. ಈ ಯುದ್ಧದ ಕುರಿತು ವಿಶ್ಲೇಷಿಸುತ್ತಾ ಮುನಾಫಿಕರು ಅಲ್ಲಾಹನ ಮಾರ್ಗದಲ್ಲಿ ಖರ್ಚು ಮಾಡದಿರುವ ಅವರ ಸ್ಥಿತಿಯನ್ನು ಹೇಳಿ ಎಚ್ಚರಿಸಲಾಗಿದೆ.

''ಅಲ್ಲಾಹನು ತನ್ನ ಅನುಗ್ರಹ ಮಾಡಿದ ಅನಂತರವೂ ಜಿಪುಣತೆ ತೋರಿಸುವವರು– ಈ ಲೋಭವು ತಮ್ಮ ಪಾಲಿಗೆ ಶುಭಕರವೆಂದೆಣಿಸದಿರಲಿ. ಇದು ಅವರ ಮಟ್ಟಿಗೆ ಅತ್ಯಂತ ಅಶುಭಕರವಾಗಿರುವುದು. ಅವರು ತಮ್ಮ ಜಿಪುಣತೆಯಿಂದ ಸಂಗ್ರಹಿಸಿಡುವ ವಸ್ತುವೇ

**ಪುನರುತ್ಥಾನ ದಿನದಂದು ಅವರ ಕಂಠ ಕಡಗವಾಗುವುದು. ಭೂಮಿ-ಆಕಾಶಗಳ ಅಂತಿಮ ಒಡೆತನ ಅಲ್ಲಾಹನಿಗಾಗಿಯೇ ಇದೆ. ನೀವು ಮಾಡುವುದನ್ನೆಲ್ಲ ಅಲ್ಲಾಹ್ ಬಲ್ಲವನಾಗಿರುತ್ತಾನೆ.''** (3: 180)

ಮುನಾಫಿಕರು ದೇವಮಾರ್ಗದಲ್ಲಿ ಜೀವಾರ್ಪಣೆ ಮಾಡುವುದಕ್ಕೆ ಹಿಂಜರಿಯುವಂತೆಯೇ ತಮ್ಮ ಸಂಪತ್ತನ್ನು ಖರ್ಚು ಮಾಡುವುದರಿಂದಲೂ ನುಣುಚಿಕೊಳ್ಳುತ್ತಾರೆ. ಸತ್ಯ ಧರ್ಮವನ್ನು ಪ್ರಬಲಗೊಳಿಸಲಿಕ್ಕಾಗಿ ತಮ್ಮ ಸಂಪತ್ತನ್ನು ಖರ್ಚು ಮಾಡಲು ಅವರ ಧನ ಮೋಹವು ಅವರಿಗೆ ಅನುಮತಿಸುವುದಿಲ್ಲವೆಂಬುದರ ಇದು ಬಹಿರಂಗ ಪ್ರಕಟನೆಯಾಗಿದೆ.

ಧರ್ಮದ ಉತ್ತುಂಗತೆ ಅಥವಾ ಧರ್ಮ ಸಂಸ್ಥಾಪನೆಯ ಪರಿಶ್ರಮವು ಕಡ್ಡಾಯವೆಂಬುದಕ್ಕೆ, ಅವನ ಈಮಾನಿನ ಮಾನದಂಡವಾಗಿದ್ದು ಅದರಿಂದ ಹಿಂಜರಿಯುವುದು ಮತ್ತು ಹಣ ಖರ್ಚು ಮಾಡದಿರುವುದು ನಿಫಾಕ್(ಕಾಪಟ್ಯ)ನ ಲಕ್ಷಣವೆಂದು ಸಾರಿರುವುದೇ ಆಧಾರವಾಗಿದೆ.

2. ವಿನಾಕಾರಣ ಜಿಹಾದ್‌ನಲ್ಲಿ ಪಾಲ್ಗೊಳ್ಳುವುದರಿಂದ ವಿನಾಯಿತಿ ಕೇಳುವವರಿಗೆ ಅಲ್ಲಾಹನ ಮೇಲೂ ಪರಲೋಕದ ಮೇಲೂ ನಂಬಿಕೆಯಿಲ್ಲವೆಂಬುದರ ಸ್ಪಷ್ಟ ಲಕ್ಷಣವಾಗಿದೆಯೆಂದು ಈ ಕೆಳಗಿನ ಸೂಕ್ತಗಳು ಸ್ಪಷ್ಟಪಡಿಸುತ್ತದೆ. **''ಅಲ್ಲಾಹ್ ಮತ್ತು ನಿರ್ಣಾಯಕ ದಿನದ ಮೇಲೆ ವಿಶ್ವಾಸವಿಡುವವರು ತಮಗೆ ತನು-ಧನಗಳೊಂದಿಗೆ ಹೋರಾಟ ನಡೆಸುವುದರಿಂದ ವಿನಾಯಿತಿ ನೀಡಬೇಕೆಂದು ಎಂದೆಂದಿಗೂ ವಿನಂತಿಸಲಾರರು. ಅಲ್ಲಾಹನು ಧರ್ಮನಿಷ್ಠರನ್ನು ಚೆನ್ನಾಗಿ ಬಲ್ಲವನಾಗಿರುತ್ತಾನೆ. ಅಲ್ಲಾಹ್ ಮತ್ತು ಅಂತಿಮ ದಿನದಲ್ಲಿ ವಿಶ್ವಾಸವಿರಿಸದವರು ಮಾತ್ರ ಇಂತಹ ನಿವೇದನೆಗಳನ್ನು ಮಾಡುತ್ತಾರೆ. ಅವರ ಹೃದಯಗಳಲ್ಲಿ ಸಂಶಯವಿದೆ. ಅವರು ತಮ್ಮ ಸಂಶಯಗಳಲ್ಲೇ ತಲ್ಲಣಗೊಳ್ಳುತ್ತಿದ್ದಾರೆ.''** (9: 44-45)

ಅಲ್ಲಾಹನ ನಾಮದ ಉತ್ತುಂಗತೆಗಾಗಿ ಜೀವ-ಸೊತ್ತುಗಳೊಂದಿಗೆ ಜಿಹಾದ್ ಮಾಡುವುದು ಕಡ್ಡಾಯವಾಗದಿರುತ್ತಿದ್ದರೆ, ಅದನ್ನು ಈಮಾನ್ ಮತ್ತು ನಿಫಾಕ್‌ನ ಮಾನದಂಡವಾಗಿ ಮಾಡುತ್ತಿರಲಿಲ್ಲ. ಈ ಸೂಕ್ತವು, ಇಸ್ಲಾಮ್ ಮತ್ತು 'ಕುಫ್ರ್'ಗಳ ಮಧ್ಯೆ ಸಂಘರ್ಷವೇರ್ಪಡುವಾಗ ತಮ್ಮ ಜೀವ-ಸೊತ್ತುಗಳೊಂದಿಗೆ ಇಸ್ಲಾಮನ್ನು ಬೆಂಬಲಿಸುವವರು ಮತ್ತು ತಮ್ಮೆಲ್ಲ ಶಕ್ತಿ ಸಾಮರ್ಥ್ಯಗಳನ್ನು ಅದರ ಪ್ರಾಬಲ್ಯಕ್ಕಾಗಿ ವ್ಯಯಿಸುವವರೇ ನೈಜ ವಿಶ್ವಾಸಿಗಳೆಂದು ಸಾರುತ್ತದೆ. ತದ್ವಿರುದ್ಧವಾಗಿ ಇಸ್ಲಾಮಿಗೆ ಸಹಾಯಕರಾಗುವ ಬದಲು ಅದರಿಂದ ನುಣುಚಿಕೊಳ್ಳುವವರು ಮತ್ತು ವಿನಾ ಕಾರಣ ತಮ್ಮ ಜೀವ-ಸೊತ್ತುಗಳನ್ನು ಅರ್ಪಿಸಲು ಹಿಂಜರಿಯುವವರು ಸುಳ್ಳುಗಾರರು. ಅವರಿಗೆ ಪರಲೋಕದ ಮೇಲಾಗಲಿ, ಅಲ್ಲಾಹನ ವಾಗ್ದಾನಗಳ ಮೇಲಾಗಲಿ ನಂಬಿಕೆಯಿಲ್ಲ, ಅಂತಹವರ ಹೃದಯಗಳನ್ನು ಸಂಶಯದ ರೋಗ ಬಾಧಿಸಿದೆಯೆಂದು ಹೇಳುತ್ತದೆ.

3. ಒಂದು ಸಂದರ್ಭದಲ್ಲಿ ಜಿಹಾದ್‌ನಲ್ಲಿ ಪಾಲ್ಗೊಳ್ಳದ ಮತ್ತು ಅದರಿಂದ ನುಣುಚಿಕೊಳ್ಳುವವರಿಗೆ 'ಮುರ್ತದ್ದ್' (ಧರ್ಮಭ್ರಷ್ಟರು) ಎಂಬ ಪದ ಬಳಸಲಾಗಿದೆ.

''ವಾಸ್ತವದಲ್ಲಿ ಸನ್ಮಾರ್ಗವು ಸ್ಪಷ್ಟಗೊಂಡ ಬಳಿಕ ಅದರಿಂದ ವಿಮುಖರಾಗಿ ಬಿಟ್ಟವರಿಗೆ ಶೈತಾನನು ಈ ಧೋರಣೆಯನ್ನು ಸುಲಭಗೊಳಿಸಿರುವನು ಮತ್ತು ಅವರಿಗಾಗಿ ಹುಸಿ ನಿರೀಕ್ಷೆಗಳ ಸರಣಿಯನ್ನು ದೀರ್ಘಗೊಳಿಸಿರುವನು. ಆದುದರಿಂದಲೇ ಅವರು ಅಲ್ಲಾಹನು ಅವತೀರ್ಣಗೊಳಿಸಿದ ಧರ್ಮವನ್ನು ಮೆಚ್ಚದವರೊಡನೆ, ಕೆಲವು ವಿಷಯಗಳಲ್ಲಿ ನಾವು ನಿಮ್ಮನ್ನು ಅನುಸರಿಸುವೆವು ಎಂದು ಹೇಳಿಬಿಟ್ಟರು. ಅವರ ಈ ರಹಸ್ಯ ಮಾತುಗಳನ್ನು ಅಲ್ಲಾಹನು ಚೆನ್ನಾಗಿ ಬಲ್ಲನು. ದೇವಚರರು ಇವರ ಆತ್ಮಗಳನ್ನು ವಶಪಡಿಸಿಕೊಳ್ಳುವಾಗ ಮತ್ತು ಇವರ ಮುಖಗಳಿಗೂ ಬೆನ್ನುಗಳಿಗೂ ಹೊಡೆಯುತ್ತಾ ಇವರನ್ನು ಕೊಂಡೊಯ್ಯುವಾಗ ಇವರ ಅವಸ್ಥೆ ಏನಾದೀತು? ಇವರು ಅಲ್ಲಾಹನನ್ನು ಕೋಪಗೊಳಿಸುವಂತಹ ಮಾರ್ಗವನ್ನು ಅನುಸರಿಸಿದರು ಮತ್ತು ಅವನ ಮೆಚ್ಚುಗೆಯ ಮಾರ್ಗವನ್ನು ಅನುಸರಿಸಲು ಇಷ್ಟಪಡಲಿಲ್ಲವೆಂಬ ಕಾರಣದಿಂದಲೇ ಹೀಗಾಗುವುದು. ಆದುದರಿಂದಲೇ ಅವನು ಇವರ ಸಕಲ ಕರ್ಮಗಳನ್ನು ನಿರರ್ಥಕ ಗೊಳಿಸಿ ಬಿಟ್ಟನು.'' (47: 25–28)

ಈ ಸೂಕ್ತಗಳಲ್ಲಿ ಪರಲೋಕದಲ್ಲಿ ಮುನಾಫಿಕರಿಗೆ 'ಮುರ್ತದ್ದ್' ಮತ್ತು ಕಾಫಿರರಿಗೆ ನೀಡುವಂತಹ ಶಿಕ್ಷೆಯನ್ನೇ ಸೂಚಿಸಲಾಗಿದೆ. ಜಿಹಾದ್‌ನಿಂದ ಹಿಂಜರಿಯುವುದು ಮತ್ತು ಅದಕ್ಕಾಗಿ ಹಣ ಖರ್ಚು ಮಾಡದಿರುವುದು ನಿಫಾಕ್ ಆಗಿದೆಯೆಂದು ಅನೇಕ ಸೂಕ್ತಗಳಲ್ಲಿ ಹೇಳಲಾಗಿದೆ. ಅವರ ಕಾರ್ಯನೀತಿಯು ಅವರ ಅವಿಶ್ವಾಸದ ಪರಿಣಾಮವೆನ್ನಲಾಗಿದೆ. ಆ ಎಲ್ಲ ಸೂಕ್ತಗಳ ವಿಷಯಗಳನ್ನು ಆಲಿ ಇಮ್ರಾನ್, ಅನ್ನಿಸಾ, ಅನ್ಫಾಲ್, ಅತ್ತೌಬಃ, ಅಹ್‌ಝಾಬ್, ಮುಹಮ್ಮದ್ ಮತ್ತು ಅಲ್‌ಫತ್ಹ್ ಅಧ್ಯಾಯಗಳ ಅಧ್ಯಯನಗಳಿಂದ ತಿಳಿಯಬಹುದು. ನಿಫಾಕ್‌ನ ಎರಡು ದೊಡ್ಡ ಪ್ರಕಾರಗಳಿವೆ. 1) ವಿಶ್ವಾಸಪರ. 2) ಕರ್ಮಪರ.

ವಿಶ್ವಾಸ ಪರ ನಿಫಾಕ್ ಎಂದರೆ ಮನದಲ್ಲಿ ಅವಿಶ್ವಾಸ ಹೊಂದಿದ್ದು ಬಾಯಲ್ಲಿ ವಿಶ್ವಾಸಿಯೆಂದು ಸಾರುವುದು. ಇಂತಹವರು ಇಸ್ಲಾಮಿನಿಂದ ಹೊರ ಹೋದವರಾಗಿದ್ದಾರೆ. ಅಪ್ಪಟ ಕಾಫಿರರಿಗಿಂತಲೂ ಈ ಮಂದಿ ಕೆಟ್ಟವರು. ಅವರಿಗೆ ಕಾಫಿರರಿಗಿಂತಲೂ ಕಠೋರ ಶಿಕ್ಷೆಯಿದೆ. ಅವರು ನರಕದ ಅತ್ಯಂತ ಕೆಳಸ್ತರದಲ್ಲಿರುವರು. ಆದರೆ ಕೇವಲ ಪ್ರಯೋಗದಲ್ಲಿ ಮುನಾಫಿಕರಾಗಿರುವವರು ಇಸ್ಲಾಮಿನ ಪರಿಧಿಯಿಂದ ಹೊರಗಾದವರಲ್ಲ. ಇಸ್ಲಾಮಿನ ಪ್ರಾಬಲ್ಯಕ್ಕಾಗಿ ನಡೆಸುವ ಪರಿಶ್ರಮದಿಂದ ನುಣುಚಿಕೊಳ್ಳುವವರು ಮತ್ತು ಅದಕ್ಕಾಗಿ ಹಣ ಖರ್ಚು ಮಾಡದವರು. ಈ ಇಬ್ಬರೂ ಮುನಾಫಿಕರಾಗಿದ್ದಾರೆ. ಆದರೆ ಈ ಎರಡು ವರ್ಗಗಳ ನಿಯಮಗಳು ಬೇರೆ ಬೇರೆಯಾಗಿವೆ.

## ಆಧಾರ- 9

## ಮಾನವರು ಮತ್ತು ಜಿನ್ನ್‌ಗಳ ಸೃಷ್ಟಿಯ ಉದ್ದೇಶ:

ಅಲ್ಲಾಹನು ಹೇಳುತ್ತಾನೆ- "**ನಾವು ಮಾನವರನ್ನು ಮತ್ತು ಜಿನ್ನ್‌ಗಳನ್ನು ನಮ್ಮ ಇಬಾದತ್‌ಗಾಗಿಯಲ್ಲದೆ ಸೃಷ್ಟಿಸಲಿಲ್ಲ.**" (51:56) ಅಲ್ಲಾಹನು ಈ ಬೃಹತ್ ಪ್ರಪಂಚದ ಸೃಷ್ಟಿಕರ್ತ, ಒಡೆಯ ಮತ್ತು ಆಜ್ಞಾಧಿಕಾರಿಯಾಗಿದ್ದಾನೆ. ಅದರಲ್ಲಿರುವ ಎಲ್ಲ ವಸ್ತುಗಳೂ ಅವನ ಸೃಷ್ಟಿ, ಅವನ ಸೊತ್ತು ಮತ್ತು ಅವನಿಗೆ ಅಧೀನವಾಗಿವೆ. ಪ್ರಪಂಚದ ಎಲ್ಲ ವಸ್ತುಗಳೂ ತಮ್ಮ ಸೃಷ್ಟಿಕರ್ತನ, ಒಡೆಯನ ಆರಾಧನೆ ಮತ್ತು ಸ್ತುತಿಯಲ್ಲಿ ತಲ್ಲೀನವಾಗಿವೆ. ಮಾನವನು ಆತನ ದಾಸನಾಗಿದ್ದಾನೆ. ತನ್ನ ಈ ಸ್ವತಂತ್ರ ಜೀವಿಯನ್ನು ಅಥವಾ ದಾಸನನ್ನು ಯಾವ ರೀತಿಯ ಇಬಾದತ್(ದಾಸ್ಯಾರಾಧನೆ)ಗಾಗಿ ಸೃಷ್ಟಿಸಿದ್ದಾನೆ? ಅದು ಕೇವಲ ಅವನನ್ನು ಪೂಜಿಸುವುದು ಮಾತ್ರವೇ ಅಥವಾ ಜೀವನದ ಎಲ್ಲ ವಿಷಯಗಳಲ್ಲೂ ಅವನ ಅನುಸರಣೆ ಮಾನವನ ಮೇಲೆ ಕಡ್ಡಾಯವೇ ಎಂಬ ಪ್ರಶ್ನೆಗೆ ಸರಿಯಾದ ಉತ್ತರ ಕಂಡುಕೊಳ್ಳುವುದು ಅಗತ್ಯವಾಗಿದೆ. ಏಕೆಂದರೆ ನಾವು ತಪ್ಪು ಉತ್ತರದ ಪ್ರಕಾರ ನಡೆದು ನಮ್ಮನ್ನು ನಾವು ಸಮಾಧಾನ ಪಡಿಸಿದರೆ ನಾವು ನಮ್ಮ ಸೃಷ್ಟಿಯ ಉದ್ದೇಶವನ್ನು ಗ್ರಹಿಸುವಲ್ಲಿ ವಿಫಲರಾಗುವೆವು. ಅದರ ಸರಿಯಾದ ಅರ್ಥವನ್ನು ಪ್ರಸ್ತುತ ಸೂಕ್ತ ಅವತೀರ್ಣಗೊಂಡಿರುವ ಗ್ರಂಥ ಮಾತ್ರ ನೀಡಬಲ್ಲುದು. ಮಾನವನಿಗೆ ದೇವನ ದಾಸ್ಯಾನುಸರಣೆಯ ನೇರಮಾರ್ಗವನ್ನು ತೋರಿಸಲಿಕ್ಕಾಗಿ ಮತ್ತು ಅವನನ್ನು ಸೃಷ್ಟಿಸಿರುವುದು ಯಾವ ಇಬಾದತ್‌ಗಾಗಿ ಎಂಬುದನ್ನು ಕಲಿಸಲಿಕ್ಕಾಗಿಯೇ ಕುರ್‌ಆನ್ ಅವತೀರ್ಣಗೊಂಡಿದೆ. ಮಾನವನು ದೇವನನ್ನು ಪೂಜಿಸಬೇಕೆಂಬುದು ಮಾತ್ರ ಕುರ್‌ಆನಿನ ಬೇಡಿಕೆಯಲ್ಲ, ಬದಲಾಗಿ, ಸಂಪೂರ್ಣ ಜೀವನದಲ್ಲಿ ಅವನನ್ನು ಮಾತ್ರ ಅನುಸರಿಸಬೇಕೆಂದು ತಿಳಿಸುತ್ತದೆ. ಆರಂಭದಲ್ಲಿಯೇ ಕುರ್‌ಆನ್ ನಮಗೆ, ಮಾನವನನ್ನು ಅಲ್ಲಾಹನು ಈ ಲೋಕದಲ್ಲಿ ತನ್ನ ಖಲೀಫ (ಪ್ರತಿನಿಧಿ) ಆಗಿ ಮಾಡಿ ಕಳಿಸಿದ್ದಾನೆ. ಪ್ರಾತಿನಿಧ್ಯದ ಈ ಹೊಣೆಗಾರಿಕೆಯನ್ನು ನಿರ್ವಹಿಸುವುದೇ ಅವನ ಅತಿ ಪ್ರಮುಖ ಬಾಧ್ಯತೆಯಾಗಿದೆಯೆಂದು ಕಲಿಸಿದೆ. ಅಲ್ಲಾಹನು ನಿಮ್ಮ ಸಂಪೂರ್ಣ ಜೀವನಕ್ಕಾಗಿ ಒಂದು ಧರ್ಮ-ಇಸ್ಲಾಮ್‌ನ್ನು ಕಳಿಸಿದ್ದಾನೆ. ಅದನ್ನು ಪೂರ್ಣವಾಗಿ ಅನುಸರಿಸುವುದು ನಿಮ್ಮ ಮೇಲೆ ಕಡ್ಡಾಯವೆಂದು ಅದು ನಮಗೆ ಸಾರುತ್ತದೆ. ಅದು ನಮಗೆ ಐದು ಹೊತ್ತಿನ ನಮಾಝ್, ರಮಝಾನಿನ ಉಪವಾಸ ವ್ರತ, ಸಂಪತ್ತಿನ ಝಕಾತ್ ಮತ್ತು ಹಜ್ಜ್ ಕರ್ಮವು ಕಡ್ಡಾಯವೆಂದು ಕಲಿಸುತ್ತದೆ. ಅದು ನಮಗೆ ಬಡ್ಡಿ ಹರಾಮ್, ವ್ಯಾಪಾರ ಹಲಾಲ್, ಹಂದಿ ಮಾಂಸ ಹರಾಮ್, ಕುರಿ ಮಾಂಸ ಹಲಾಲ್, ವ್ಯಭಿಚಾರ ಹರಾಮ್, ನಿಕಾಹ್ ಹಲಾಲ್ ಎಂದು ತಿಳಿಸುತ್ತದೆ. ತೂಕಳತೆಯನ್ನು ಸರಿಯಾಗಿ ಮಾಡಿರಿ. ತಮ್ಮ ಹಕ್ಕನ್ನು ಪಡೆಯುವಾಗ ಸಂಪೂರ್ಣವಾಗಿ ಪಡೆಯುವ ಮತ್ತು ಇತರರಿಗೆ ಕೊಡುವಾಗ ಕಡಿಮೆ ಕೊಡುವವರಿಗೆ ವಿನಾಶವಿದೆಯೆಂದು ಹೇಳುತ್ತದೆ. ಅದು ನಮಗೆ ಸತ್ಯದ ಸಾಕ್ಷ್ಯ ನೀಡುವಂತೆ ಆದೇಶಿಸುತ್ತದೆ- ಅದರಿಂದಾಗಿ ನಿಮ್ಮ

ಆಪ್ತಬಂಧುಗಳಿಗೆ ತೊಂದರೆಯಾದರೂ ಸರಿ. ಎಲ್ಲ ವ್ಯವಹಾರಗಳಲ್ಲೂ ವಿವಾದಗಳಲ್ಲೂ ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನಂತೆ ನೀವು ತೀರ್ಮಾನ ಮಾಡಬೇಕೆಂದು ಆಜ್ಞಾಪಿಸುತ್ತದೆ. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿಗೆ ವಿರುದ್ಧವಾಗಿ ಆಜ್ಞೆ ನೀಡುವವರು ಮತ್ತು ತೀರ್ಮಾನಿಸುವವರು ಧಿಕ್ಕಾರಿಗಳು, ಅಕ್ರಮಿಗಳು ಮತ್ತು ಕರ್ಮಭ್ರಷ್ಟರೆಂದು ತಿಳಿಸುತ್ತದೆ. ಕಳ್ಳನ ಕೈ ಕಡಿಯಲು ಮತ್ತು ವ್ಯಭಿಚಾರಿಗಳಿಗೆ ಛಡಿಯೇಟು ಬಾರಿಸಲು ಹೇಳುತ್ತದೆ. ಜೀವ, ಸೊತ್ತುಗಳ ಮೂಲಕ ಅಲ್ಲಾಹನ ಶತ್ರುಗಳೊಂದಿಗೆ ಹೋರಾಡಲು ಆಜ್ಞಾಪಿಸುತ್ತದೆ. ಅದರಿಂದ ನುಣುಚಿಕೊಳ್ಳುವುದು ಮತ್ತು ಜಿಪುಣತೆ ತೋರುವುದು ಕಪಟ ವಿಶ್ವಾಸಿಗಳ ಕೆಲಸವೆಂದು ಸಾರುತ್ತದೆ. ಇಂತಹ ಹಲವಾರು ವಿಷಯಗಳನ್ನು ಕುರ್‌ಆನ್ ಒತ್ತು ಕೊಟ್ಟು ಹೇಳುತ್ತದೆ. ಅವುಗಳಿಂದೆಲ್ಲ ನಮಗೆ, ಇಸ್ಲಾಮ್ ಧರ್ಮದ ಪರಿಪೂರ್ಣ ಅನುಸರಣೆಯೇ ಇಬಾದತ್ ಆಗಿದೆಯೆಂದೂ ಅದಕ್ಕಾಗಿಯೇ ಮಾನವರನ್ನು ಸೃಷ್ಟಿಸಲಾಗಿದೆಯೆಂದೂ ತಿಳಿದು ಬರುತ್ತದೆ. ಈ ಇಬಾದತ್‌ನ ಮೇರೆಯಿಂದ ಮಾನವ ಜೀವನದ ಯಾವುದೇ ರಂಗವೂ ಹೊರಗಿಲ್ಲ, ಇಸ್ಲಾಮ್ ಧರ್ಮದ ಸಂಪೂರ್ಣ ಅನುಸರಣೆಯೇ 'ಇಕಾಮತುದ್ದೀನ್' ಆಗಿದೆ. ಪ್ರಸ್ತುತ ಸೂಕ್ತ(51:56)ದಲ್ಲಿ ಹೇಳಲಾದ, ಮಾನವ ಸೃಷ್ಟಿಯ ಉದ್ದೇಶವು, ಅದು ಕಡ್ಡಾಯವಾಗಿದೆಯೆಂಬ ಬಗ್ಗೆ ಯಾರಿಗೆ ತಾನೇ ಸಂದೇಹವುಂಟಾಗಬಹುದು?

ಇಮಾಮ್ ರಾಘಿಬೀಯವರು ಈ ಸೂಕ್ತವನ್ನು ವ್ಯಾಖ್ಯಾನಿಸುತ್ತಾ ಹೀಗೆ ಬರೆಯುತ್ತಾರೆ- ಮಾನವರನ್ನು ಯಾವ ಇಬಾದತ್‌ಗಾಗಿ ಸೃಷ್ಟಿಸಲಾಗಿದೆಯೋ ಅದು ಅಲ್ಲಾಹನ ಆದೇಶಗಳನ್ನು ಗೌರವದಿಂದ ಪಾಲಿಸುವುದು ಮತ್ತು ಸೃಷ್ಟಿಗಳನ್ನು ಪ್ರೀತಿಸುವುದಾಗಿದೆ. ಆ ಗೌರವವು ಪ್ರತಾಪವಂತನಾದ ಅಲ್ಲಾಹನಿಗೆ ಸಲ್ಲತಕ್ಕದ್ದಾಗಿದೆ. ಅದನ್ನು ಕೇವಲ ಬುದ್ಧಿಯಿಂದ ಗ್ರಹಿಸಲು ಸಾಧ್ಯವಿಲ್ಲ, ಇದರಲ್ಲಿ ಶರೀಅತ್‌ನ ಪಾಲನೆ ಮತ್ತು ಪ್ರವಾದಿ(ಸ) ಅವರ ಮಾದರಿಯ ಅನುಕರಣೆಯಿದೆ. ಆದ್ದರಿಂದಲೇ ಅಲ್ಲಾಹನು ತನ್ನ ಪ್ರವಾದಿಗೆ ಈ ಎರಡೂ ವಿಧಾನಗಳನ್ನು ಸ್ಪಷ್ಟಪಡಿಸಿ ತನ್ನ ದಾಸರಿಗೆ ಉಪಕಾರ ಮಾಡಿದ್ದಾನೆ. ಇಲ್ಲಿ ಇಬಾದತ್ ಎಂದರೆ ಕೇವಲ ಪೂಜೆ, ಉಪಾಸನೆ ಮಾತ್ರವಲ್ಲ, ಇದರ ವ್ಯಾಪ್ತಿಯಲ್ಲಿ ಅಲ್ಲಾಹನ ಹಕ್ಕುಗಳೂ ದಾಸರ ಹಕ್ಕುಗಳೂ ಸೇರಿವೆಯೆಂದು ವ್ಯಕ್ತವಾಗುತ್ತದೆ. ಮಾನವನು ಈ ಎರಡೂ ಇಬಾದತ್‌ಗಳಿಗೆ ಬದ್ಧನಾಗಿದ್ದಾನೆ. ಇಬಾದತ್‌ನ ಸರಿಯಾದ ಅರ್ಥ-ವಿವರಣೆಯನ್ನು ಅರಿಯಲಿಕ್ಕಾಗಿ ಅಲ್ಲಾಹನ ಗ್ರಂಥವನ್ನೂ ಪ್ರವಾದಿಯವರ ಜೀವನ ಮಾದರಿಯನ್ನೂ ದೃಷ್ಟಿಯಲ್ಲಿರಿಸಬೇಕೆಂದು ಇದರ ಅರ್ಥ.

## ಆಧಾರ- 10

## ಮುಸ್ಲಿಮ್ ಸಮುದಾಯದ ಜೀವನೋದ್ದೇಶ:

ಮುಸ್ಲಿಮರನ್ನು 'ಸುಮಧ್ಯ' ಮತ್ತು 'ಉತ್ತಮ' ಸಮುದಾಯವಾಗಿ ಮಾಡುವ ಅಗತ್ಯ ವೇನಿತ್ತು ಮತ್ತು ಅದರ ಉದ್ದೇಶವೇನು?

ಈ ವರೆಗೆ ವಿವರಿಸಲಾದ 9 ಆಧಾರಗಳಿಂದ, ಸತ್ಯಧರ್ಮವನ್ನು ಮಿಥ್ಯ ಧರ್ಮಗಳ ಮೇಲೆ ಪ್ರಬಲಗೊಳಿಸುವುದು ಕಡ್ಡಾಯವಾಗಿದೆಯೆಂದು ಸಾಬೀತುಗೊಂಡಿತು. ಅದಕ್ಕೆ 'ಇಕಾಮತುದ್ದೀನ್' ಎಂಬ ಪದವನ್ನು ಕುರ್‌ಆನ್ ಪ್ರಯೋಗಿಸಿದೆ. ಅದು ಎಷ್ಟು ಕಡ್ಡಾಯ ವೆಂದರೆ, ಆ ಮಾರ್ಗದಲ್ಲಿ ಹೋರಾಟ ನಡೆಸಲು ಹಿಂಜರಿಯುವುದು ಮತ್ತು ಅದಕ್ಕಾಗಿ ಹಣ ಖರ್ಚು ಮಾಡದಿರುವುದು ನಿಫಾಕ್(ಕಾಪಟ್ಯ)ನ ಲಕ್ಷಣವಾಗಿದೆ. ಪ್ರತಿಯೊಬ್ಬ ಪ್ರವಾದಿಯ ಕಾಲಾನಂತರ ಅವರ ಸಮುದಾಯವು, ಅವರ ಉತ್ತರಾಧಿಕಾರಿಯಾಗಿದ್ದು ಅವರ ಕಾರ್ಯವನ್ನು ಮುಂದುವರಿಸುವುದು ಅವರ ಕರ್ತವ್ಯವಾಗಿತ್ತು. ಆದರೆ ಮುಸ್ಲಿಮ್ ಸಮುದಾಯವು ಅಂತಿಮ ಪ್ರವಾದಿ ಮುಹಮ್ಮದ್‌ರ(ಸ) ಉತ್ತರಾಧಿಕಾರಿಯಾಗಿದೆ. ಅವರ ಕೆಲಸವನ್ನು ಅದು ಕಿಯಾಮತ್‌ನ ವರೆಗೆ ನಿರ್ವಹಿಸಲು ನೇಮಿಸಲ್ಪಟ್ಟಿದೆ. ಪ್ರವಾದಿ(ಸ) ಅವರ ನಂತರ ಇನ್ನು ಯಾವುದೇ ಗ್ರಂಥವಾಗಲಿ ಪ್ರವಾದಿಯಾಗಲಿ ಬರುವುದಿಲ್ಲ, ಆದ್ದರಿಂದ ಪವಿತ್ರ ಕುರ್‌ಆನ್ ಮುಸ್ಲಿಮ್ ಸಮುದಾಯಕ್ಕೆ ಅದರ ಹೊಣೆಗಾರಿಕೆಯನ್ನು ತಿಳಿಸಿತು. ಅದನ್ನು 'ಸುಮಧ್ಯ' ಹಾಗೂ 'ಉತ್ತಮ' ಸಮುದಾಯವಾಗಿ ಮಾಡುವ ಅಗತ್ಯ ಮತ್ತು ಉದ್ದೇಶವನ್ನು ಸ್ಪಷ್ಟವಾಗಿ ವಿವರಿಸಿತು. ಕುರ್‌ಆನ್ ಅವತೀರ್ಣಗೊಂಡಿರುವ ಮತ್ತು ಪ್ರವಾದಿ ಮುಹಮ್ಮದ್(ಸ) ಪ್ರಾಯೋಗಿಕವಾಗಿ ಮಾಡಿ ತೋರಿಸಿರುವ ಕಾರ್ಯವನ್ನು ಈ ಸಮುದಾಯವು ಅಂತ್ಯದಿನದ ವರೆಗೆ ಮಾಡಬೇಕಾಗಿದೆಯೆಂಬ ವಿಷಯದಲ್ಲಿ ಯಾವುದೇ ಸಂದೇಹ ಉಳಿಯದಿರಲಿಕ್ಕಾಗಿ ಇದನ್ನು ಸ್ಪಷ್ಟಪಡಿಸಲಾಗಿದೆ. ಕುರ್‌ಆನಿನ ಇಂಗಿತ ಪ್ರಕಾರ, ಮುಸ್ಲಿಮ್ ಸಮುದಾಯವು ಯಾವ ಕಾರ್ಯದಲ್ಲಿ ತನ್ನ ಪ್ರವಾದಿಯ ಉತ್ತರಾಧಿಕಾರಿಯೋ ಆ ಕಾರ್ಯವು ಅದರ ಕರ್ತವ್ಯವಾಗಿದೆ. ಅದನ್ನು ತೊರೆದು ಬಿಟ್ಟರೆ ಅದು ತನ್ನ ಉದ್ದೇಶದಲ್ಲಿ ವಿಫಲವಾಯಿತೆಂದೇ ಅರ್ಥ. ಈ ಕುರಿತು ಕೆಲವು ಸೂಕ್ತಗಳು ಇಲ್ಲಿವೆ.

''ಇದೇ ರೀತಿ ನೀವು ಜಗತ್ತಿನ ಮಾನವರ ಬಗ್ಗೆ ಸಾಕ್ಷಿಯಾಗಿರಲಿಕ್ಕೂ, ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಯಾಗಿರಲಿಕ್ಕೂ ನಾವು ನಿಮ್ಮನ್ನು ಒಂದು 'ಸುಮಧ್ಯ' ಸಮುದಾಯವನ್ನಾಗಿ ಮಾಡಿದ್ದೇವೆ. ನಿಮ್ಮಲ್ಲಿ ಸಂದೇಶವಾಹಕರ ಅನುಸರಣೆ ಮಾಡುವವರಾರು ಮತ್ತು ವಿಮುಖ ರಾಗುವವರಾರೆಂದು ತಿಳಿಯಲಿಕ್ಕಾಗಿ ಮಾತ್ರ. ನೀವು ಈ ಮುಂಚೆ ಮುಖ ಮಾಡುತ್ತಿದ್ದ 'ಕಿಬ್ಲಾ' ವನ್ನು ನಾವು ನಿಶ್ಚಯಿಸಿದ್ದೆವು. ಈ ಸಂಗತಿಯಂತು ಅತ್ಯಂತ ಕಠಿಣವಾಗಿತ್ತು. ಆದರೆ ಅಲ್ಲಾಹನಿಂದ ಸನ್ಮಾರ್ಗ ಹೊಂದಿದವರಿಗೆ ಕಿಂಚಿತ್ತೂ ಕಠಿಣವಾಗಲಿಲ್ಲ. ಅಲ್ಲಾಹನು ನಿಮ್ಮ ಸತ್ಯವಿಶ್ವಾಸವನ್ನು

ಎಂದಿಗೂ ನಿಷ್ಫಲಗೊಳಿಸಲಾರನು. ಅಲ್ಲಾಹನು ಜನರ ಬಗ್ಗೆ ಅತ್ಯಂತ ಕೃಪಾಳುವೂ ಕರುಣಾನಿಧಿಯೂ ಆಗಿರುತ್ತಾನೆಂಬುದು ಖಾತ್ರಿಯಾಗಿ ತಿಳಿಯಿರಿ.'' (2: 143)

ಇಲ್ಲಿ 'ವಸತ್' ಎಂದರೆ ಸುಮಧ್ಯ. ಎರಡು ದಡಗಳ ಮಧ್ಯೆ ಇರುವಂತಹದ್ದು. ಅದರಲ್ಲಿ ಉತ್ತಮವೆಂಬ ತಾತ್ಪರ್ಯವೂ ಅಡಗಿದೆ. ಏಕೆಂದರೆ ಎರಡು ದಡಗಳ ಮಧ್ಯೆ ಇರುವ ವಸ್ತು ಸಂತುಲಿತ ಮತ್ತು ನ್ಯಾಯಪೂರ್ಣವಾಗಿದ್ದು, ಅದನ್ನು ಮುಸ್ಲಿಮ್ ಸಮುದಾಯವೆಂದು ಕರೆದಿರುವುದು, ಅದು ಅಲ್ಲಾಹನು ಮಾನವರ ಮಾರ್ಗದರ್ಶನಕ್ಕಾಗಿ ತನ್ನ ಪ್ರವಾದಿಗಳ ಹಾಗೂ ಸಂದೇಶವಾಹಕರ ಮೂಲಕ ತೆರೆದುಕೊಟ್ಟಿರುವ ಹಾಗೂ ಆರಂಭದಲ್ಲೇ ಸನ್ಮಾರ್ಗದ ನೈಜ ಹೆದ್ದಾರಿಯ ಮಧ್ಯದಲ್ಲಿರುವುದರಿಂದಾಗಿದೆ. (ತದಬ್ಬುರೆ ಕುರ್‌ಆನ್)

ಮುಸ್ಲಿಮ್ ಸಮುದಾಯವನ್ನು ಸುಮಧ್ಯ ಅಥವಾ ನ್ಯಾಯಪೂರ್ಣ ಮತ್ತು ಸಂತುಲಿತವಾಗಿ ಮಾಡಿರುವ ಅಗತ್ಯ ಮತ್ತು ಉದ್ದೇಶ ಹೀಗಿದೆ:

'ಅಲ್ಲಾಹನು ಜನರ ಮಾರ್ಗದರ್ಶನಕ್ಕಾಗಿ ನೇಮಿಸಿದ ಜನಾಂಗದವರು ಅಲ್ಲಾಹನೊಂದಿಗೆ ಮಾಡಿದ್ದ ಒಪ್ಪಂದವನ್ನು ಮುರಿದರು. ಅವನ ಶರೀಅತ್(ಧರ್ಮಶಾಸ್ತ್ರ)ನಲ್ಲಿ ತಿದ್ದುಪಡಿಗಳನ್ನು ಮಾಡಿದರು. ಅವನ ನೇರಮಾರ್ಗವನ್ನು ಕಳೆದುಕೊಂಡರು. ಅವನು ನಿಶ್ಚಯಿಸಿದ ಅಭಿಮುಖ ಕೇಂದ್ರ(ಕಿಬ್ಲಾ)ದಿಂದ ಮುಖ ತಿರುಗಿಸಿದರು. ಯಾವುದರ ಸಾಕ್ಷ್ಯವನ್ನು ವಹಿಸಲು ತಮ್ಮನ್ನು ನೇಮಿಸಲಾಗಿತ್ತೋ ಅದನ್ನು ಅಡಗಿಸಿದರು. ಇಂತಹ ಪರಿಸ್ಥಿತಿಯಲ್ಲಿ, ಅಲ್ಲಾಹನ ನೇರಮಾರ್ಗದಲ್ಲಿ ಸ್ಥಿರವಾಗಿದ್ದು, ಅವನ ಸಂದೇಶವಾಹಕರ ಮೂಲಕ ಕಳುಹಿಸಲಾದ ಸತ್ಯ ಧರ್ಮದ ವಾಹಕರಾಗಿ ಲೋಕಾಂತ್ಯದ ವರೆಗೆ ಜನರ ಮುಂದೆ ಅದರ ಸಾಕ್ಷಿಗಳಾಗಿರುವಂತಹ ಒಂದು ಸಮುದಾಯವನ್ನು ನೇಮಿಸುವುದು ಅಗತ್ಯವಾಗಿತ್ತು.

ಪ್ರವಾದಿಯವರು ನಿಮ್ಮ ಮೇಲೆ ಮತ್ತು ನೀವು ಜನರ ಮೇಲೆ ಸಾಕ್ಷಿಗಳಾಗುವುದೆಂದರೆ ಜನರ ಮೇಲೆ ಸಾಕ್ಷಿಯಾಗುವ ಪ್ರವಾದಿಯವರ ಹೊಣೆಯು, ಇನ್ನು ಅವರ ಸಮುದಾಯಕ್ಕೆ ವರ್ಗಾವಣೆಗೊಂಡಿದೆಯೆಂದರ್ಥ. ಈಗ ಸಮುದಾಯವು ಎಲ್ಲ ಕಾಲಗಳ, ಎಲ್ಲಾ ಪ್ರದೇಶಗಳ ಮತ್ತು ಎಲ್ಲ ಭಾಷೆಗಳ ಜನರ ಮೇಲೆ ಅಲ್ಲಾಹನ ಧರ್ಮದ ಸಾಕ್ಷಿಗಳಾಗಬೇಕಾಗಿದೆ. ಈ ಕರ್ತವ್ಯ ನಿರ್ವಹಣೆಯಲ್ಲಿ ಲೋಪ ತೋರಿದರೆ, ಜನರು ದಾರಿಗೆಡುವುದರಿಂದ ಉಂಟಾಗುವ ದುಷ್ಪರಿಣಾಮಗಳಲ್ಲಿ ಇತರರ ಜೊತೆ ಅವರೂ ಸಮಾನ ಭಾಗಿಗಳಾಗುವರು.'

(ತದಬ್ಬುರೆ ಕುರ್‌ಆನ್)

ಪ್ರವಾದಿಯವರು(ಸ) ತಮ್ಮ ಮಾತು-ಕೃತಿಗಳ ಮೂಲಕ ಜನರ ಮುಂದೆ ಪ್ರದರ್ಶಿಸಿದ ಸತ್ಯದ ಸಾಕ್ಷ್ಯವು ಸಂಪೂರ್ಣ ಧರ್ಮವು ಸಾಕ್ಷ್ಯವಾಗಿತ್ತೇ ವಿನಾ ಯಾವುದೇ ಆಂಶಿಕ ರಂಗದ ಸಾಕ್ಷ್ಯವಾಗಿರಲಿಲ್ಲ. ಅವರು ಈ ಸಾಕ್ಷ್ಯವನ್ನು ಮಕ್ಕಾ ಮತ್ತು ತಾಯಿಫ್‌ನ ಗಲ್ಲಿಗಳಲ್ಲಿ, ಮಿನಾ ಮತ್ತು ಅರಫಾತ್‌ನ ಮೈದಾನಗಳಲ್ಲಿ, ಅರೇಬಿಯಾದ ನಾನಾ ಮೂಲೆಗಳಿಂದ ಹಜ್ಜ್‌ಗಾಗಿ ಬರುವ ಯಾತ್ರಾ ತಂಡಗಳು ಮತ್ತು ಗೋತ್ರಗಳಲ್ಲಿ ಈ ಸಾಕ್ಷ್ಯವನ್ನು ನೀಡಿದ್ದರು. ಅನಂತರ

ಮದೀನಾದ ಮಸ್ಜಿದುನ್ನಬವಿಯಲ್ಲಿ, ಅಲ್ಲಿನ ಪೇಟೆಗಳಲ್ಲಿ, ಬದ್ರ್, ಉಹುದ್, ಖೈಬರ್, ಹುನೈನ್ ಮತ್ತು ತಬೂಕ್‌ನ ಯುದ್ಧರಂಗಗಳಲ್ಲೂ ನೀಡಿದ್ದರು. ಪ್ರವಾದಿ(ಸ) ಈ ಸಾಕ್ಷ್ಯವನ್ನು ಜೀವನದ ಯಾವುದೇ ಒಂದು ರಂಗಕ್ಕೆ ಸೀಮಿತಗೊಳಿಸಿರಲಿಲ್ಲ, ಅದು ಎಲ್ಲ ರಂಗಗಳನ್ನೂ ಒಳಗೊಂಡಿತ್ತು. ಆದ್ದರಿಂದ ಅವರ ಸಮುದಾಯದ ಮೇಲೆ ಅಷ್ಟೇ ವಿಶಾಲತೆ ಮತ್ತು ಸಮಗ್ರತೆಯೊಂದಿಗೆ ಸತ್ಯಧರ್ಮದ ಸಾಕ್ಷ್ಯವು 'ಫರ್ಝ್' (ಕಡ್ಡಾಯ) ಆಗಿದೆ. ಮುಸ್ಲಿಮ್ ಸಮುದಾಯವನ್ನು ಕೂರಿಸಲಾದ ಈ ಮಹಾನ್ ಪದವಿಯ ತಾತ್ಪರ್ಯವನ್ನು ಈ ಕೆಳಗಿನ ಸೂಕ್ತವು ಚೆನ್ನಾಗಿ ನಿರ್ಣಯಿಸುತ್ತದೆ.

ಸತ್ಯವಿಶ್ವಾಸಿಗಳೇ 'ಬಾಗಿರಿ' ಮತ್ತು 'ಸಾಷ್ಟಾಂಗವೆರಗಿರಿ' ಮತ್ತು ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ, ಸತ್ಕರ್ಮಗಳನ್ನೆಸಗಿರಿ- ಇದರಿಂದಲೇ ನಿಮಗೆ ಯಶಸ್ಸು ಸಿಗುವುದೆಂದು ನಿರೀಕ್ಷಿಸಬಹುದು. ಅಲ್ಲಾಹನ ಮಾರ್ಗದಲ್ಲಿ ಹೋರಾಡಬೇಕಾದ ರೀತಿಯಲ್ಲಿ ಹೋರಾಡಿರಿ. ಅವನು ತನ್ನ ಕಾರ್ಯಕ್ಕಾಗಿ ನಿಮ್ಮನ್ನು ಆರಿಸಿ ಕೊಂಡಿರುತ್ತಾನೆ ಮತ್ತು ಧರ್ಮದಲ್ಲಿ ನಿಮಗೇನೂ ಸಂಕೀರ್ಣತೆಯನ್ನಿರಿಸಿಲ್ಲ, ನಿಮ್ಮ ಪಿತಾಮಹರಾದ ಇಬ್ರಾಹೀಮರ ಸಮುದಾಯದಲ್ಲಿ ಸ್ಥಿರವಾಗಿರಿ. ಅಲ್ಲಾಹನು ಮೊದಲೂ ನಿಮ್ಮ ಹೆಸರನ್ನು 'ಮುಸ್ಲಿಮ್' ಎಂದಿಟ್ಟಿದ್ದನು ಮತ್ತು ಇದರಲ್ಲೂ (ಕುರ್‌ಆನಿನಲ್ಲೂ ನಿಮಗೆ ಇದೇ ಹೆಸರಿದೆ.) ಇದು ಸಂದೇಶವಾಹಕರು ನಿಮ್ಮ ಬಗ್ಗೆ ಸಾಕ್ಷಿಗಳಾಗಲಿಕ್ಕಾಗಿ ಮತ್ತು ನೀವು ಜನರ ಬಗ್ಗೆ ಸಾಕ್ಷಿಗಳಾಗಲಿ ಕ್ಕಾಗಿ (ಆಗಿರುತ್ತದೆ.) ಆದುದರಿಂದ ನಮಾಝನ್ನು ಸಂಸ್ಥಾಪಿಸಿರಿ; ಝಕಾತ್ ಕೊಡಿರಿ ಮತ್ತು ಅಲ್ಲಾಹನೊಂದಿಗೆ ಸಂಬಂಧ ಸ್ಥಾಪಿಸಿಕೊಂಡಿರಿ. ಅವನೇ ನಿಮ್ಮ ರಕ್ಷಕ ಮಿತ್ರ. ಅತ್ಯಂತ ಶ್ರೇಷ್ಠ ರಕ್ಷಕ ಮಿತ್ರನವನು ಮತ್ತು ಅತ್ಯುತ್ತಮ ಸಹಾಯಕನವನು. (ಅಲ್‌ಹಜ್ಜ್: 77-78)

ಜನರ ಮುಂದೆ ಸತ್ಯದ ಸಾಕ್ಷ್ಯವಹಿಸುವ ಸಲುವಾಗಿ ಸಮುದಾಯಕ್ಕೆ 'ಮುಸ್ಲಿಮ್' ಎಂಬ ಬಿರುದು ನೀಡಲಾಗಿದೆ. ಮೊದಲ ಸೂಕ್ತದಲ್ಲಿ ರುಕೂಅ್, ಸುಜೂದ್ ಹಾಗೂ ಪ್ರಭುವಿನ ಆರಾಧನೆ ಮತ್ತು ಸತ್ಕರ್ಮಗಳ ಆಜ್ಞೆ ನೀಡಲಾಗಿದೆ. ಇದೆಲ್ಲವೂ ಸಂಪೂರ್ಣ ಧರ್ಮದ ಮೇರೆಯೊಳಗೆ ಬರುತ್ತದೆ. ಮಿಥ್ಯ ಧರ್ಮದ ಬಲವನ್ನು ಮುರಿಯದೆ ಸತ್ಯಧರ್ಮದಲ್ಲಿ ಪೂರ್ಣರೂಪದಲ್ಲಿ ನಡೆಯಲು ಸಾಧ್ಯವಿಲ್ಲ, ಆದ್ದರಿಂದ ಅನಂತರದ ಸೂಕ್ತವನ್ನು ಜಿಹಾದ್‌ನ ಆಜ್ಞೆಯೊಂದಿಗೆ ಆರಂಭಿಸಲಾಗಿದೆ. ಸಮಗ್ರ ಮತ್ತು ಸರ್ವತೋಮುಖ ಜಿಹಾದ್ ಬಹಳ ಕಠಿಣ. ಆದ್ದರಿಂದಲೇ ವಿಶ್ವಾಸಿಗೆ ಕಹಿಯಾಗಿರುವಂತಹ (ಕೆಲವು ವಿಷಯಗಳನ್ನು), ಆದರೆ ಸ್ವಾದಿಷ್ಟವಾಗಿ ಮಾಡುವಂತಹ ಕೆಲವು ವಿಷಯಗಳನ್ನು ಹೇಳಲಾಗಿದೆ.

ಸಕಲ ಮಾನವರ ಪೈಕಿ, ನಿಮ್ಮದೇ ಕರುಣಾಳು, ಅನುಗ್ರಹದಾತನಾದ ಅಲ್ಲಾಹನು ನಿಮ್ಮನ್ನು ಆಯ್ಕೆ ಮಾಡಿದ್ದಾನೆ. ಇದನ್ನು ಕೇಳುತ್ತಲೇ ವಿಧೇಯನಾದ ಹಾಗೂ ತನ್ನ ಯಜಮಾನನನ್ನು ಪ್ರೀತಿಸುವ ದಾಸನು ಅತಿ ಸಂತೋಷದಿಂದ ಬೀಗುತ್ತಾನೆ. ಯಾವುದೇ ಕಷ್ಟವು ಅವನಿಗೆ ತೃಣ ಸಮಾನವಾಗಿ ಕಾಣುತ್ತದೆ. ಕರುಣಾಮಯಿಯಿಂದ, ನಿಮಗೆ ಧರ್ಮದಲ್ಲಿ ಯಾವುದೇ

ಕ್ಲಿಷ್ಟತೆಯನ್ನಿರಿಸಲಿಲ್ಲವೆಂಬ ಪ್ರೀತಿ ತುಂಬಿದ ಸ್ವರ ಕೇಳುತ್ತದೆ. ಅಲ್ಲಾಹನ ಮಾರ್ಗ ದಲ್ಲಿ ಜಿಹಾದ್ ಮತ್ತು ಹೊಣೆಗಾರಿಕೆಯನ್ನು ನಿಭಾಯಿಸುವುದನ್ನು ಸುಲಭಗೊಳಿಸುವ ಎರಡನೆಯ ವಿಷಯವಿದು.

ಇನ್ನು ಮೂರನೆಯ ವಿಷಯ. ಇದು ನಿಮ್ಮ ಪಿತಾಮಹರಾದ ಇಬ್ರಾಹೀಮರ ಧರ್ಮ ಮತ್ತು ಕಾನೂನು ಸಂಹಿತೆಯಾಗಿದೆ. ಅವರು ದೇವಮಾರ್ಗದಲ್ಲಿ ಜಿಹಾದ್ ಮಾಡುವ (ಪರಿಶ್ರಮಿಸುವ) ಮೂಲಕ ಯಾವ ಪದವಿಗೇರಿದರು ಮತ್ತು ಸತ್ಯಕ್ಕಾಗಿ ಅವರು ಮಾಡಿದ ತ್ಯಾಗಗಳೆಷ್ಟು ಎಂಬುದನ್ನೊಮ್ಮೆ ನೋಡಿರಿ. ವಾಸ್ತವಿಕತೆ ಇದಾಗಿರುವಾಗ ಅವರ ಸೌಭಾಗ್ಯವಂತ ಮಕ್ಕಳಿಗೆ ತಂದೆಯ ಉತ್ತರಾಧಿಕಾರ ಮತ್ತು ಅವರ ಧೋರಣೆ ಭಾರವಾಗುವುದಾದರೂ ಹೇಗೆ? ಇಲ್ಲಿ ಇನ್ನಷ್ಟು ಒತ್ತುಕೊಟ್ಟು ಹೇಳಲಾಗುತ್ತದೆ: ಪ್ರವಾದಿಯವರು ನಿಮ್ಮ ಮೇಲೆ ಮತ್ತು ನೀವು ಜನರ ಮೇಲೆ ಸಾಕ್ಷಿಗಳಾಗಲಿಕ್ಕಾಗಿ ನಿಮಗೆ 'ಮುಸ್ಲಿಮ್' ಎಂಬ ಬಿರುದು ನೀಡಿರುವುದೂ ಅವನೇ. ಈ ಸಮುದಾಯಕ್ಕೆ ಮುಸ್ಲಿಮ್ ಎಂಬ ಹೆಸರಿಟ್ಟಿರುವುದರ ಉದ್ದೇಶವೇ 'ಶಹಾದತ್ ಅಲನ್ನಾಸ್' ಅರ್ಥಾತ್ ಮಾನವರ ಮೇಲೆ ಸಾಕ್ಷಿಗಳಾಗುವುದಾಗಿದೆ. ತರುವಾಯ ನಮಾಝ್ ಸಂಸ್ಥಾಪಿಸಿರಿ, ಝಕಾತ್ ಕೊಡಿರಿ ಮತ್ತು ಅಲ್ಲಾಹನ ಮೇಲೆ ಭರವಸೆ ಇಡಿರಿ. ಅವನೊಂದಿಗೆ ಸಂಬಂಧ ಹೊಂದಿರಿ ಎಂದು ಹೇಳಲಾಗಿದೆ.

ನಮಾಝ್ ಸಂಸ್ಥಾಪನೆ ಮತ್ತು ಝಕಾತ್‌ನ ಪಾವತಿಯು ಇಡೀ ಧರ್ಮದ ಶೀರ್ಷಿಕೆಯಾಗಿದೆ. ಆತ್ಮಸಂಸ್ಕರಣೆಯ ಅತ್ಯುತ್ತಮ ಉಪಾಧಿಯೂ ಆಗಿದೆ. ದೇವ ಮಾರ್ಗದ ಸಂಕಷ್ಟಗಳಲ್ಲಿ ಶಕ್ತಿಯೂ ಆಸರೆಯೂ ಆಗಿದೆ. ಆದ್ದರಿಂದಲೇ ನಮಾಝ್ ಮತ್ತು ಝಕಾತ್‌ನ ನಂತರ ಅಲ್ಲಾಹನೊಂದಿಗೆ ಸಂಬಂಧ ಜೋಡಿಸುವಂತೆ ಆಜ್ಞಾಪಿಸಲಾಗಿದೆ. ಅಲ್ಲಾಹನೇ ನಿಮ್ಮ ಒಡೆಯ ಮತ್ತು ಸಂರಕ್ಷಕನೆಂದು ಹೇಳಿ ಮಾತನ್ನು ಕೊನೆಗೊಳಿಸಲಾಗಿದೆ. ಇದರ ಅರ್ಥ ನೀವು ಅಲ್ಲಾಹನೊಂದಿಗೆ ಬಲವಾದ ಸಂಬಂಧ ಇರಿಸದಿರುವ ತನಕ, ಅವನ ಮೇಲೆ ಪೂರ್ಣ ಭರವಸೆ ಇಡದಿರುವ ತನಕ ಹಾಗೂ ಅವನು ನಿಮ್ಮ ಪ್ರಾರ್ಥನೆಗೆ ಓಗೊಟ್ಟು ನಿಮಗೆ ಸಹಾಯ ಮಾಡದಿರುವ ತನಕ ನೀವು ಸತ್ಯದ ಸಾಕ್ಷ್ಯ ಮತ್ತು ಧರ್ಮ ಸಂಸ್ಥಾಪನೆಯ ಕರ್ತವ್ಯವನ್ನು ನಿರ್ವಹಿಸಲಾರಿರಿ. ಅಲ್‌ಬಕರಃ ಮತ್ತು ಅಲ್‌ಹಜ್ಜ್ ಅಧ್ಯಾಯಗಳ ಸಮಾನಾರ್ಥದ ಎರಡು ಸೂಕ್ತಗಳು ಆಲಿ ಇಮ್ರಾನ್‌ನಲ್ಲಿವೆ. ''ನಿಮ್ಮಲ್ಲಿ ಸತ್ಕರ್ಮದ ಕಡೆಗೆ ಆಹ್ವಾನಿಸುವ, ಒಳಿತನ್ನು ಆಜ್ಞಾಪಿಸುವ ಮತ್ತು ಕೆಡುಕುಗಳಿಂದ ತಡೆಯುವಂತಹ ಜನಕೂಟವೊಂದು ಇರಬೇಕಾದುದು ಅತ್ಯಗತ್ಯ. ಈ ಕಾರ್ಯವೆಸಗುವವರೇ ನಿಶ್ಚಯವಾಗಿಯೂ ಕೃತಾರ್ಥರಾಗುವವರು. ಸುವ್ಯಕ್ತ ನಿದರ್ಶನಗಳು ಪ್ರಾಪ್ತಿಯಾದ ಮೇಲೆ ಭಿನ್ನಾಭಿಪ್ರಾಯಗಳಲ್ಲಿ ಸಿಲುಕಿ ವಿಭಿನ್ನ ಪಕ್ಷ ಪಂಗಡಗಳಲ್ಲಿ ಹರಿಹಂಚಿ ಹೋದವರಂತೆ ನೀವಾಗಬಾರದು. ಹೀಗೆ ಮಾಡಿದವರು ಘೋರ ಯಾತನೆಯನ್ನನುಭವಿಸುವರು. ಅಂದು ಕೆಲವರು ಪ್ರಸನ್ನವದನರಾಗುವರು. ಇನ್ನು ಕೆಲವರ ಮುಖಗಳು ಕರ್ರಗಾಗುವುವು. ಮುಖ ಕರ್ರಗಾದವರೊಡನೆ (ಹೀಗೆ ಹೇಳಲಾಗುವುದು), ಈಮಾನಿನ ಭವ್ಯ ಕೊಡುಗೆ

ಪ್ರಾಪ್ತವಾದ ಬಳಿಕವೂ ನೀವು ನಿಷೇಧ ನೀತಿಯನ್ನು ಅನುಸರಿಸಿದಿರಾ? ಸರಿ, ಹಾಗಾದರೆ ಈ ಕೃತಘ್ನತೆಯ ಬದಲಿಗೆ ನರಕ ಯಾತನೆಯ ಸವಿಯನ್ನುಣ್ಣಿರಿ. ಪ್ರಸನ್ನವದನರಾದವರ ವಿಚಾರ- ಅವರಿಗೆ ಅಲ್ಲಾಹನ ಕೃಪಾಶ್ರಯದಲ್ಲಿ ಸ್ಥಾನ ಸಿಗುವುದು ಮತ್ತು ಅವರು ಸದಾ ಅದೇ ಸ್ಥಿತಿಯಲ್ಲಿರುವರು. ನಾವು ನಿಮಗೆ ನಿಖರವಾಗಿ ತಿಳಿಸುತ್ತಿರುವ ಅಲ್ಲಾಹನ ಸುಸ್ಪಷ್ಟ ಆದೇಶಗಳಿವು. ಏಕೆಂದರೆ ಅಲ್ಲಾಹನು ಲೋಕವಾಸಿಗಳ ಮೇಲೆ ಅಕ್ರಮವೆಸಗುವ ಇರಾದೆಯನ್ನೇನೂ ಇಟ್ಟಿರುವುದಿಲ್ಲ, ಭೂಮಿ-ಆಕಾಶಗಳ ಸಮಸ್ತ ವಸ್ತುಗಳ ಮಾಲಕನು ಅಲ್ಲಾಹನು ಮತ್ತು ಸಕಲ ವ್ಯವಹಾರಗಳೂ ಅಲ್ಲಾಹನ ಆಸ್ಥಾನದಲ್ಲಿ ಅರ್ಪಿಸಲ್ಪಡುತ್ತವೆ. ಮಾನವರ ಸನ್ಮಾರ್ಗದರ್ಶನ ಮತ್ತು ಸಂಸ್ಕಾರಗಳಿಗಾಗಿ ನಿಯೋಗಿಸಲಾಗಿರುವ ಅತ್ಯುತ್ತಮ ಜನಕೂಟವು ನಿಮ್ಮದಾಗಿರುತ್ತದೆ. ನೀವು ಒಳಿತಿನ ಆದೇಶವನ್ನೀಯುತ್ತೀರಿ, ಪಾಪಕಾರ್ಯಗಳಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ವಿಶ್ವಾಸವಿಡುತ್ತೀರಿ. ಈ ಗ್ರಂಥದವರು ವಿಶ್ವಾಸವಿಡುತ್ತಿದ್ದರೆ ಅವರಿಗೇ ಚೆನ್ನಾಗಿತ್ತು. ಅವರಲ್ಲಿ ಕೆಲವರು ಸತ್ಯವಿಶ್ವಾಸಿಗಳೂ ಕಂಡು ಬರುತ್ತಾರೆ. ಆದರೂ ಅವರ ಅಧಿಕಾಂಶ ಜನರು ಆಜ್ಞೋಲ್ಲಂಘಕರಾಗಿರುತ್ತಾರೆ.'' (104-110)

ಇವೆರಡು ಸೂಕ್ತಗಳು ಪರಸ್ಪರ ಪೂರಕವಾಗಿದ್ದು, ಒಂದು ಇನ್ನೊಂದನ್ನು ಪೂರ್ಣಗೊಳಿಸುತ್ತದೆ. ಅವು ಮುಸ್ಲಿಮ್ ಸಮುದಾಯಕ್ಕೆ ಈ ಲೋಕದ ನಾಯಕತ್ವವನ್ನು (ಇಮಾಮತ್) ಅರ್ಪಿಸಲಾಗಿದೆಯೆಂದು ಸಾರುತ್ತವೆ. ಮುಸ್ಲಿಮ್ ಸಮುದಾಯವು ಇಸ್ಲಾಮೀ ಸಂದೇಶದ ಕೊನೆಯ ವಾಹಕವಾಗಿದೆ. ಈ ಹುದ್ದೆಯು ಸಮುದಾಯದ ಎಲ್ಲ ಕರ್ಮಗಳು ಮತ್ತು ಚುಟುವಟಿಕೆಗಳನ್ನು ವ್ಯಾಪಿಸಿದೆ. ನಾಯಕತ್ವ ಮಾರ್ಗದರ್ಶನ ಮತ್ತು ಮೇಲ್ನೋಟವು ಅದರ ಸ್ಥಾನವಾಗಿದೆ. ಈ ವಸ್ತು ಸ್ಥಿತಿಯನ್ನು ಕುರ್‌ಆನ್ ಸ್ಪಷ್ಟವಾಗಿ ಸಾರಿದೆ.

''ನೀವು ಎಲ್ಲ ಸಮುದಾಯಗಳ ಪೈಕಿ ಅತ್ಯುತ್ತಮ ಸಮುದಾಯವಾಗಿದ್ದೀರಿ. ಜನರಿಗಾಗಿ (ಅವರನ್ನು ಸಂಸ್ಕರಿಸಲಿಕ್ಕಾಗಿ) ನೀವು ಬಂದವರಾಗಿದ್ದೀರಿ. ನೀವು ಒಳಿತನ್ನು ಆದೇಶಿಸುತ್ತೀರಿ, ಕೆಡುಕಿನಿಂದ ತಡೆಯುತ್ತೀರಿ ಮತ್ತು ಅಲ್ಲಾಹನ ಮೇಲೆ ಪ್ರಾಮಾಣಿಕವಾದ ವಿಶ್ವಾಸವಿರಿಸುತ್ತೀರಿ.''

ಇನ್ನೊಂದು ಕಡೆ- ನೀವು ಜನರ ಮೇಲೆ ಸಾಕ್ಷಿಗಳಾಗಿರಲಿಕ್ಕಾಗಿ ನಿಮ್ಮನ್ನು ಒಂದು ಸುಮಧ್ಯ ಸಮುದಾಯವಾಗಿ ಮಾಡಿದ್ದೇವೆ ಎನ್ನಲಾಗಿದೆ.

ಆದ್ದರಿಂದ ಕಾರವಾನದ ಹಿಂದೆ ಸಾಗುವುದೋ ಇತರ ಜನಾಂಗಗಳ ಸಹಾಯದಿಂದ ಬದುಕುವುದೋ ಈ ಸಮುದಾಯಕ್ಕೆ ಭೂಷಣವಲ್ಲ, ಇತರರ ಆಜ್ಞಾನುಸರಣೆ ಮಾಡುವುದು, ನಕಲು ಹೊಡೆಯುವುದು ಶರಣಾಗತರಾಗಿ ಜೀವಿಸುವುದು ಮತ್ತು ಅದರಲ್ಲೇ ತೃಪ್ತಿಪಡುವುದು ಇದಕ್ಕೆ ತಕ್ಕುದಲ್ಲ, ಇದರ ಕೆಲಸ ನೇತೃತ್ವವಹಿಸುವುದು, ಮಾರ್ಗದರ್ಶನ ಮಾಡುವುದು, ಒಳಿತನ್ನು ಆದೇಶಿಸುವುದು, ಕೆಡುಕನ್ನು ತಡೆಯುವುದೇ ಆಗಿದೆ.

ಮೌ। ಅಮೀನ್ ಅಹ್ಸನ್ ಇಸ್ಲಾಹಿಯವರು, ನೀವು ಅತ್ಯುತ್ತಮ ಸಮುದಾಯವಾಗಿರುತ್ತೀರಿ ಎಂಬುದನ್ನು ವ್ಯಾಖ್ಯಾನಿಸುತ್ತಾ ಹೀಗೆ ಬರೆಯುತ್ತಾರೆ- 'ಖೈರೆ ಉಮ್ಮತ್'ನಲ್ಲಿ

ಇನ್ನು ಧರ್ಮದ ನೇರ ಹೆದ್ದಾರಿಯಲ್ಲಿ ನೀವೇ ಇರುತ್ತೀರಿ ಎಂಬುದರ ಕಡೆಗೆ ಸೂಚನೆಯಿದೆ. ಅಲ್ಲಾಹನು ಅವತೀರ್ಣಗೊಳಿಸಿದ್ದ ಧರ್ಮದಲ್ಲಿ ಗ್ರಂಥದವರು ವಕ್ರತೆಯ ಮಾರ್ಗವನ್ನು ಸೃಷ್ಟಿಸಿ ನೈಜ ಧರ್ಮವನ್ನು ಅಳಿಸಿ ಬಿಟ್ಟರು. ಈಗ ಮಾನವರ ಮಾರ್ಗದರ್ಶನಕ್ಕಾಗಿ ನಿಮ್ಮನ್ನು ಎಬ್ಬಿಸಿದ್ದಾನೆ. ಈ ವಾಸ್ತವಿಕತೆಯನ್ನು ಅಲ್‌ಬಕರ ಅಧ್ಯಾಯದಲ್ಲಿ ''ನಿಮ್ಮನ್ನು ಇದೇ ರೀತಿಯಲ್ಲಿ ಸುಮಧ್ಯ ಸಮುದಾಯವನ್ನಾಗಿ ಮಾಡಿದ್ದೇವೆ'' ಎಂಬ ಸೂಕ್ತದ ಪದಗಳು ಸ್ಪಷ್ಟಪಡಿಸಿವೆ. ಈ ಸಮುದಾಯವು ಸರಿಯಾದ ನ್ಯಾಯದ ಬಿಂದುವಿನಲ್ಲಿ ಹಾಗೂ ಸುಮಧ್ಯ ಹೆದ್ದಾರಿಯಲ್ಲಿದೆ. ಆದ್ದರಿಂದ ಅದು ಉತ್ತಮ ಸಮುದಾಯವಾಗಿದೆ. ಕೆಲವು ವಾಕ್ಯಗಳ ಬಳಿಕ ಅವರು ಬರೆಯುತ್ತಾರೆ– ಇದು ಸಮುದಾಯದ ನಾಯಕತ್ವ ಪದವಿಯ ಘೋಷಣೆಯಾಗಿದೆ.

ಪ್ರಸ್ತುತ ನಾಲ್ಕೂ ಸೂಕ್ತಗಳಿಂದ ತಿಳಿದು ಬರುವಂತೆ, ಈ ಸಮುದಾಯದ ನೇಮಕ ಮತ್ತು ಸುಮಧ್ಯ ಹಾಗೂ ಉತ್ತಮ ಸಮುದಾಯವಾಗಿ ಮಾಡುವ ಉದ್ದೇಶವೇ ಇದು ಪ್ರವಾದಿ(ಸ) ಸಮರ್ಪಿಸಿದಂತಹ ಸತ್ಯ ಧರ್ಮದ ಸಾಕ್ಷವನ್ನು ವಿಸ್ತೃತ ಹಾಗೂ ಸಮಗ್ರವಾಗಿ ವಹಿಸುವುದಾಗಿದೆ. ಈ ಕಾರ್ಯದಲ್ಲಿ ಈ ಸಮುದಾಯವು ಕಿಯಾಮತ್‌ನ ವರೆಗೆ ಪ್ರವಾದಿಯವರ ಉತ್ತರಾಧಿಕಾರಿಯಾಗಿದೆ.

## ಪ್ರವಾದಿ(ಸ) ಮತ್ತವರ ಸಂಗಾತಿಗಳ ಜೀವನದಿಂದ ಆಧಾರ:

ಒಂದು ವಿಷಯ ಕಡ್ಡಾಯ (ಫರ್ಝ್) ಎಂದು ಕುರ್‌ಆನ್‌ನಿಂದ ಸಾಬೀತಾದರೆ, ಅದರ ಪ್ರಾಯೋಗಿಕ ರೂಪವು ಹದೀಸ್‌ಗಳಲ್ಲಿ ಸಿಗುತ್ತದೆ. ಪ್ರವಾದಿ(ಸ) ಮತ್ತು ಸಂಗಾತಿಗಳು ಹಾಗೂ ಅವರ ಕಾಲಾನಂತರದವರು ಧರ್ಮ ಸಂಸ್ಥಾಪನೆಯ ಕರ್ತವ್ಯನ್ನು ಈಡೇರಿಸಿ ಆ ಸತ್ಯ ಧರ್ಮವನ್ನು ಇತರ ಧರ್ಮಗಳ ಮೇಲೆ ಪ್ರಬಲಗೊಳಿಸಲು ಹೇಗೆ ಪ್ರಯತ್ನಿಸಿದರೋ ಅವು ಹದೀಸ್, ಸೀರತ್ ಮತ್ತು ಇಸ್ಲಾಮೀ ಇತಿಹಾಸದ ದಾಖಲೆಗಳಲ್ಲಿ ಸುರಕ್ಷಿತವಾಗಿದೆ. ಅವುಗಳ ಅಧ್ಯಯನ ನಡೆಸಿದ ಮತ್ತು ಅದರಲ್ಲಿ ಆಸಕ್ತಿ ತಳೆದ ಲಕ್ಷಗಟ್ಟಳೆ ಸಂಖ್ಯೆಯ ಮುಸ್ಲಿಮ್ ವಿದ್ವಾಂಸರು, ಮಾತ್ರವಲ್ಲ ಸಾವಿರಾರು ಸಂಖ್ಯೆಯ ಮುಸ್ಲಿಮೇತರ ದಾರ್ಶನಿಕರು ಇದನ್ನು ಚೆನ್ನಾಗಿ ಅರಿತಿದ್ದಾರೆ. ಸಂಕ್ಷಿಪ್ತದಲ್ಲಿ ಪ್ರವಾದಿಯವರ(ಸ) ಮತ್ತು ಸಹಾಬಿಗಳ ಜೀವನ ಮಾದರಿಯಿಂದ, ಅವರು ನೈಜ ಮತ್ತು ಸತ್ಯಧರ್ಮವನ್ನು ಇತರ ಧರ್ಮಗಳ ಮೇಲೆ ಪ್ರಬಲಗೊಳಿಸುವುದು ಮತ್ತು ಅದನ್ನು ಸಂಸ್ಥಾಪಿಸುವುದು ಕಡ್ಡಾಯವೆಂದು ಭಾವಿಸಿದ್ದರು. ಅದುವೇ ಅವರ ಜೀವನದ ಪರಮೋದ್ದೇಶವಾಗಿತ್ತು ಎಂದು ತಿಳಿದು ಬರುತ್ತದೆ. ಅದೇ ಮಾದರಿಯನ್ನು ಅನುಸರಿಸಿ ನಾವು ನಡೆದ ನಮ್ಮ ಜೀವನೋದ್ದೇಶವನ್ನು ಸಾಧಿಸಬಲ್ಲೆವು. ಈ ಕೃತಿಯ ರಚನೆಯ ಉದ್ದೇಶವೂ ಅದನ್ನು ತೋರಿಸಿ ಕೊಡುವುದಾಗಿದೆ. ಅದರ ಹೊಣೆಗಾರಿಕೆಯನ್ನು ಅಲ್ಲಾಹನು ನಮ್ಮ ಮೇಲೆ ಹೊರಿಸಿರುವನು. ಅದನ್ನು ನಾವು ಈಡೇರಿಸಿದ್ದೇವೆ. ಮುಂದೆ ಅಲ್ಲಾಹನೇ ತೀರ್ಮಾನ ಕೈಗೊಳ್ಳುವನು.

## ಉಪಸಂಹಾರ:

ಅಲ್ಲಾಹನ ದಾಸನು ಅವನಿಗೆ ವಹಿಸಿಕೊಡಲಾಗಿರುವ ಹೊಣೆಗಾರಿಕೆಯನ್ನು ವಹಿಸಲು ಗರಿಷ್ಠ ಪ್ರಯತ್ನಿಸಬೇಕು ಮತ್ತು ಅದರಲ್ಲಿ ಯಾವುದೇ ಲೋಪ ಮಾಡಬಾರದೆಂಬುದು ಒಂದು ಅಂಗೀಕೃತ ತತ್ವವಾಗಿದೆ. ಅವನು ಅದನ್ನು ನಿರ್ವಹಿಸಿದರೆ ಹೊಣೆ ಮುಕ್ತನಾದನು. ಶರೀಅತ್ ವಿಧಿಸಿರುವ ಕಡ್ಡಾಯ ಕಾರ್ಯಗಳ ಪೈಕಿ ಕೆಲವು ವೈಯಕ್ತಿಕವಾಗಿವೆ, ಅವನು ಅವುಗಳನ್ನು ನಿರ್ವಹಿಸಲೇಬೇಕು. ಉದಾ: ಐದು ಹೊತ್ತಿನ ನಮಾಝ್ ಪ್ರತಿಯೊಬ್ಬ ಪ್ರೌಢ ಮುಸ್ಲಿಮನ ಮೇಲೆ ಕಡ್ಡಾಯವಾಗಿದೆ. ಅದರಲ್ಲಿಯೂ ಪ್ರಪ್ರಥಮವಾಗಿ ಅದನ್ನು ನಿರ್ವಹಿಸುವ ಏರ್ಪಾಡು ಮಾಡುವುದು, ಅದಕ್ಕಾಗಿ ಪ್ರಯತ್ನಿಸುವುದು ಕಡ್ಡಾಯ. ಒಂದು ವೇಳೆ ಅವನು ಅದನ್ನು ಸರಿಯಾಗಿ ನಿರ್ವಹಿಸುತ್ತಿದ್ದು, ಅವನ ನಿಯಂತ್ರಣದಲ್ಲಿ ಇಲ್ಲದ ಯಾವುದೇ ಅಡ್ಡಿ ಆತಂಕಗಳು ಸಂಭವಿಸದಿದ್ದರೆ ಅವನ ಹೊಣೆಗಾರಿಕೆ ತೀರಿತು, ಅವನು ಪರಲೋಕದ ವಿಚಾರಣೆಯಿಂದ ಪಾರಾಗುವನು. ಅಷ್ಟೇ ಅಲ್ಲ, ಅವನ ಈ ಕರ್ತವ್ಯ ನಿರ್ವಹಣೆಗಾಗಿ ಪುಣ್ಯವನ್ನೂ ಪಡೆಯುವನು. ಒಬ್ಬನು ಸಾಮೂಹಿಕ ನಮಾಝ್‌ಗಾಗಿ ಹೊರಟು ದಾರಿ ಮಧ್ಯೆಯೇ ಅಪಘಾತಕ್ಕೀಡಾಗಿ ಸಾವನ್ನಪ್ಪಿದರೆ, ಅವನು ತನ್ನ ಆ ಹೊಣೆಗಾರಿಕೆಯಿಂದ ಮುಕ್ತನಾದನು. ಅವನು ಆ ನಮಾಝನ್ನೇ ನಿರ್ವಹಿಸಿಲ್ಲದಿದ್ದರೂ ಅವನಿಗೆ ಅದರ ಸಂಪೂರ್ಣ ಪ್ರತಿಫಲ ಲಭಿಸುವುದು.

ಇನ್ನು ಕೆಲವು ಕಡ್ಡಾಯ ಕಾರ್ಯಗಳಿವೆ. ಅದರ ಸಂಬಂಧವು ಇತರರೊಂದಿಗಿರುತ್ತದೆ. ಅವುಗಳಿಗಾಗಿ ಪ್ರಯತ್ನಿಸುವುದು ಮಾತ್ರ ಮಾನವನ ಹೊಣೆಗಾರಿಕೆಯಾಗಿದೆ. ಮಾಡಿಯೇ ತೀರಬೇಕೆಂಬ ನಿರ್ಬಂಧ ಅವನ ಮೇಲಿಲ್ಲ. ಉದಾ: ಅಲ್ಲಾಹನ ಆದೇಶ ಹೀಗಿದೆ: "**ವಿಶ್ವಾಸಿಗಳೇ! ನೀವು ನಿಮ್ಮನ್ನೂ ನಿಮ್ಮ ಮನೆ ಮಂದಿಯನ್ನೂ ನರಕಾಗ್ನಿಯಿಂದ ರಕ್ಷಿಸಿರಿ.**" (66: 6)

ಈ ಸೂಕ್ತದ ಪ್ರಕಾರ, ತನ್ನ ಪತ್ನಿ ಮಕ್ಕಳನ್ನು ನರಕಾಗ್ನಿಯಿಂದ ರಕ್ಷಿಸುವುದು ಪ್ರತಿಯೊಬ್ಬ ಮುಸ್ಲಿಮನ ಕರ್ತವ್ಯವಾಗಿದೆ. ಈ ಹೊಣೆಗಾರಿಕೆಯ ಅರ್ಥವೇನು? ಪ್ರತಿಯೊಬ್ಬ ಮುಸ್ಲಿಮನು ತನ್ನ ಮಡದಿ ಮಕ್ಕಳ ಹೃದಯದಲ್ಲಿ ಸನ್ಮಾರ್ಗದ ಬೆಳಕನ್ನು ಹರಿಸಿ ಅಲ್ಲಾಹನಿಗೆ ವಿಧೇಯರನ್ನಾಗಿ ಮಾಡುವುದೇ? ಅಲ್ಲವೆಂಬುದು ವ್ಯಕ್ತ. ಅವರ ಸುಧಾರಣೆಗಾಗಿ ಗರಿಷ್ಠ ಪ್ರಯತ್ನಿಸಬೇಕೆಂಬುದೇ ಇದರ ಅರ್ಥ. ಅನ್ಯಥಾ ಕಡ್ಡಾಯವಾಗಿ ಅವರನ್ನು ವಿಧೇಯರನ್ನಾಗಿ ಮಾಡುವ ಹೊಣೆಗಾರಿಕೆಯನ್ನು ಪ್ರವಾದಿಗಳಿಗೂ ನೀಡಲಾಗಿಲ್ಲ. ಇದರ ಸ್ಪಷ್ಟ ಉದಾಹರಣೆಗಳು ಕುರ್‌ಆನಿನಲ್ಲಿವೆ. ಪ್ರವಾದಿ ನೂಹ್(ಅ)ರವರ ಪತ್ನಿ ಮತ್ತು ಪುತ್ರನು ಸತ್ಯನಿಷೇಧದಲ್ಲಿ ಸ್ಥಿರವಾಗಿ ನಿಂತರು. ಅವರಿಬ್ಬರೂ ಮುಳುಗಿ ಸತ್ತರು. ಪ್ರವಾದಿ ಲೂತ್(ಅ)ರ ಪತ್ನಿ ಬಂಡಾಯ ನೀತಿಯ ಕಾರಣ ಅಲ್ಲಾಹನ ಯಾತನೆಗೆ ಗುರಿಯಾದಳು. ಆದ್ದರಿಂದ ಪ್ರತಿಯೋರ್ವ ಮುಸ್ಲಿಮನೂ ತನ್ನ ಮಡದಿ ಮಕ್ಕಳನ್ನು ಸರಿದಾರಿಗೆ ತರಲು ಗರಿಷ್ಠ ಪ್ರಯತ್ನಿಸಬೇಕೆಂದು ಪ್ರಸ್ತುತ ಕುರ್‌ಆನ್ ಸೂಕ್ತದಿಂದಲೂ ಪ್ರವಾದಿಗಳ ಮಡದಿ ಮಕ್ಕಳ ಧೋರಣೆಯಿಂದಲೂ ತಿಳಿದು ಬರುತ್ತದೆ.

ಮಡದಿ ಮಕ್ಕಳ ಸುಧಾರಣೆಯಾದರೆ ಸರಿ. ಇಲ್ಲದಿದ್ದರೆ ಅದರ ಹೊಣೆ ಅವನ ಮೇಲಿಲ್ಲ, ಅವನು ಹೊಣೆಗಾರಿಕೆಯಿಂದ ಮುಕ್ತನಾದನು. ಇಲ್ಲಿ ಈ ಸಂಕ್ಷಿಪ್ತ ಸೂಚನೆಯನ್ನು ನೀಡಲು ಕಾರಣ ನಮ್ಮ ಹೊಣೆಯು ಸತ್ಯ ಧರ್ಮವನ್ನು ಪ್ರಬಲಗೊಳಿಸಲು ಮತ್ತು ಸಂಸ್ಥಾಪಿಸಲು ಪೂರ್ಣ ಪ್ರಯತ್ನಿಸುವುದು ಮಾತ್ರವೆಂದು ತಿಳಿಸುವುದಾಗಿದೆ. ಒಂದು ವೇಳೆ ನಾವು ಈ ಗರಿಷ್ಠ ಪ್ರಯತ್ನವನ್ನು ಮಾಡಿದ್ದರೆ ನಾವು ಹೊಣೆ ಮುಕ್ತರಾದೆವು. ಅನ್ಯಥಾ ಪ್ರಯತ್ನವನ್ನೇ ಮಾಡದೇ ಅದರಲ್ಲಿ ಪಾಲ್ಗೊಂಡೇ ಇಲ್ಲವಾದರೆ 'ಕಿಯಾಮತ್'ನಂದು ನಾವು ಹಿಡಿಯಲ್ಪಡುವೆವು. ನಮ್ಮನ್ನು ಕಠಿಣವಾದ ವಿಚಾರಣೆಗೆ ಒಳಪಡಿಸಲಾಗುವುದು ಎಂಬುದರಲ್ಲಿ ಸಂಶಯವಿಲ್ಲ.